# ಅಗ್ನಿ ಅಂಕುರ

ನಮ್ಮ ನಿಮ್ಮೆಲ್ಲರ ಮಾಸಿಕ ಪತ್ರಿಕೆ

ಸಂಪುಟ : ೧೨ ಸಂಚಿಕೆ : ೩ ಏಪ್ರಿಲ್ ೨೦೦೮ ಬೆಲೆ : ೧೦ ರೂ/.



## ಜೆಡ್ಡಿ ಏಡಿಯೂರಾಗಳ ಯಡ್ಡಿ ಅಂಗಾಯಿತನೆ ?



## ಅಡವಿದೆವ್ವ ಬಂದು ಮನೆಯವರನ್ನು ಓಡಿಸಿತು



ಗಾರ್ದಭ ಗಾಥಾ

## ಲಿಂಗಸೂಗೂರಿನ ಅಂಕಲಗಿ ಮಠದಲ್ಲೊಬ್ಬ ಡೋಂಗಿ ಸ್ವಾಮಿ !

## ತ್ರಿಶಂಕು ಸ್ಥಿತಿಯಲ್ಲಿ ಶಿವಶೇಖರಪ್ಪ ಶಿರವಾಳ





## ಗೂಗಲ್ ಬ್ರಿಜ್ ಕಮ್ ಬ್ಯಾರೇಜಿನಲ್ಲಿ ಕೋಟ್ಯಂತರ ಲೂಟಿ !

## ಹುಡುಗಿಯರ ಪ್ರೀತಿಯನ್ನು ಹೇಗೆ ಅಳೆಯಬೇಕು ?

# ಅಭಿನಂದನೆಗಳು

ಹಿರಿಯ ರಾಜಕೀಯ ಮುತ್ಸದ್ದಿ
ಶ್ರೀ ಹಣಮಂತಪ್ಪ ಕಟ್ಟೀಮನಿ
ಮಾಜಿ ಮಂಡಲ ಪ್ರಧಾನರು
ಹಳಿಸಗರ ಇವರ ಸೊಸೆ





ನನ್ನನ್ನು ಪುರಸಭೆಯ
ಅಧ್ಯಕ್ಷಸ್ಥಾನಕ್ಕೆ
ಆಯ್ಕೆ ಮಾಡಿದ
ಸರ್ವಸದಸ್ಯರಿಗೆ
ರಾಜಕೀಯ
ಗಣ್ಯರಿಗೆ -
ನಾಗರಿಕರಿಗೆ
ಹಾರ್ದಿಕ
ಅಭಿನಂದನೆಗಳು

ಶ್ರೀಮತಿ ಶಿವಮ್ಮ ಗಂಡ ಭೀಮರಾಯ ಕಟ್ಟೀಮನಿ ಹಳಿಸಗರ
ಅಧ್ಯಕ್ಷರು
ಪುರಸಭೆ ಶಹಾಪುರ

ಪತ್ರಿಕೆಯ ಪುಟ

# ಅಗ್ನಿ ಅಂಕುರ

## ನಮ್ಮ ನಿಮ್ಮೆಲ್ಲರ ಮಾಸಿಕ ಪತ್ರಿಕೆ

ಸಂಪುಟ : ೧೨    ಸಂಚಿಕೆ : ೩    ಎಪ್ರಿಲ್ – ೨೦೦೮    ಬೆಲೆ : ೧೦ ರೂ/.

ಸಂಪಾದಕರು

**ವಿಶ್ವಾರಾಧ್ಯ ಸತ್ಯಂಪೇಟೆ**

**ಪ್ರಕಾಶನ**

ಅಗ್ನಿ ಅಂಕುರ ಪತ್ರಿಕೆ ಪ್ರಕಾಶನ  ಬಸವ ಮಾರ್ಗ ಸಿ.ಬಿ.ಕಾಲನಿ
ಶಹಾಪುರ – ೫೮೫೨೨೩ ಕಲಬುರ್ಗಿ ಜಿಲ್ಲೆ
ಸಂಚಾರ : 9480161315 e-mail : satyampet.2007@rediffmail.com

## ಪ್ರತಿಧ್ವನಿ




## " ಅಗ್ನಿ ಅಂಕುರ" ಮಾರ್ಗದರ್ಶಿಯಾಗಲಿ

ಸನ್ಮಾನ್ಯ ಸಂಪಾದಕರಿಗೆ

ನಮ್ಮೆಲ್ಲರ ಅಚ್ಚು ಮೆಚ್ಚಿನ ಪತ್ರಿಕೆ 'ಅಗ್ನಿ ಅಂಕುರ 'ಮತ್ತೆ ಶುರುವಾಗಿದ್ದು , ಹೊಸ ಶೈಲಿಯಲ್ಲಿ ಪ್ರಕಟವಾದದ್ದು ಸಂತೋಷ ತಂದಿತು. ರಾಜ್ಯಮಟ್ಟದ ಪತ್ರಿಕೆಗಳನ್ನು ಕೇವಲ ಯಾಂತ್ರಿಕವಾಗಿ ಹಾಗೂ ಅನಿವಾರ್ಯವಾಗಿ ಓದುತ್ತಿರುವಾಗ ನಮ್ಮ ಭಾಗದ ಜನರು , ತಮ್ಮದೇ ಆದ ಸಮಸ್ಯೆಗಳಿಗೆ ಸ್ಪಂದಿಸುವ ,ಆಡುಭಾಷೆಯಲ್ಲಿ ವಿಷಯ ತಿಳಿಸುವ ಹಾಗೂ ವಸ್ತು ನಿಷ್ಠವಾದ ವರದಿಗಳಿರುವ ಈ ಪತ್ರಿಕೆಯನ್ನು ಸ್ವಾಗತಿಸುತ್ತಾರೆ. ಪತ್ರಿಕೆ ಹೀಗೆ ನಿಷ್ಠುರ, ನಿಷ್ಪಕ್ಷಪಾತವಾಗಿ ಬರೆಯುವಾಗ ತಮ್ಮ ಮೇಲೆ ಬರಬಹುದಾದ ಒತ್ತಡಕ್ಕೆ ಒಳಗಾಗದೆ ರಚನಾತ್ಮಕ ಕೆಲಸ ಮಾಡಿರಿ.ವ್ಯಕ್ತಿ ನಿಂದೆ ಮಾಡದೆ ಭ್ರಷ್ಟಾಚಾರದ ವಿರುದ್ಧ ತನಿಖಾ ವರದಿಗಳನ್ನು ಪ್ರಕಟಿಸಿರಿ.ಭ್ರಷ್ಟಾಚಾರದ ವಿರುದ್ಧ ಹೋರಾಡುವ ಎಲ್ಲರಿಗೂ ಪತ್ರಿಕೆ ಮಾರ್ಗದರ್ಶಿಯಾಗಲಿ

೦ ಶಂಕರಗೌಡ ಯಾಳವಾರ , ಶಹಾಪುರ

## ನಮ್ಮ ಭಾಗದ ಶಕ್ತಿ " ಅಗ್ನಿ ಅಂಕುರ"

ಸನ್ಮಾನ್ಯ ವಿಶ್ವಾರಾಧ್ಯ ಸತ್ಯಂಪೇಟೆ

ನನಗೆ ನನ್ನ ಗೆಳೆಯರೊಬ್ಬರು ಓದಲು 'ಅಗ್ನಿ ಅಂಕುರ 'ಪತ್ರಿಕೆ ಕಳಿಸಿದರು. ನೋಡಿದೆ.ಓದಿದೆ. ಖುಷಿ ತಡೆದು ಹಿಡಿಯಲು ಆಗಲಿಲ್ಲ. ನೀವ್ಯಾಕೆ ನನಗೆ ಪತ್ರಿಕೆ ಕಳಿಸಿಲ್ಲ ? ಈಗಲೇ ಪತ್ರಿಕೆ ಕಳಿಸಿರಿ. ಯಾದಗಿರಿ – ಶಹಾಪುರ ದ ರಾಜಕೀಯ ಸಂಗತಿಗಳು ಕರಾರುವಾಕ್ಕಾಗಿವೆ. ಜನಸಾಮಾನ್ಯರು ಆಡುವ ಮಾತುಗಳಿಗೆ ಪತ್ರಿಕೆ ಧ್ವನಿಯಾಗಿದೆ. ಇದು ನಮ್ಮ ಭಾಗದ ಶಕ್ತಿ ಮತ್ತು ಹೆಮ್ಮೆಯ ಪತ್ರಿಕೆ . ಇದು ಅನವರತ ಹೀಗೆ ನಡೆಯಲಿ.

೦ ಶ್ರೀನಿವಾಸರೆಡ್ಡಿ ಕಂದಕೂರ

## ನಿನಗ ಶಾಪ ತಟ್ಟದೆ ಬಿಡೋದಿಲ್ಲ

ಲೇ ಸಂಪಾದಕ........

ನಿನಗೇನು ರೋಗ ಬಡದದ ? ಯಾವಾಗ್ಲೂ ಸಾಧು ಸನ್ಯಾಸಿಗಳ ಬಗ್ಗೆನೇ ಬರಿತಿರತೀದಿ. ಗಂವ್ಹಾರದಾಗ ಆದ ಕಾರ್ಯಕ್ರಮದ ಬಗ್ಗೆ ನಿನಗ ಹೊಟ್ಟಿ ಕಿಚ್ಚ ಆದ. ನೀ ಅಲ್ಲಿಗೆ ಬರಬೇಕಿತ್ತು ನಿನ್ನ ಚರ್ಮ ಸುಲಸತ್ತಿದ್ದಿವಿ. ಕಂಡ ಕಂಡ ಸ್ವಾಮಿಗಳ ಬಗ್ಗೆ , ರಾಜಕಾರಣಿಗಳ ಬಗ್ಗೆ ಹಿಂಗೆಲ್ಲ ಬರಿತಿಯಲ್ಲ ಒಂದಲ್ಲ ಒಂದು ದಿನ ಹುಳ ಬಿದ್ದು ಸಾಯ್ತಿದಿ. ಅವ್ರ ಶಾಪ ನಿನಗೆ ತಟ್ಟದೆ ಬಿಡೋದಿಲ್ಲ.

ಜೇವರ್ಗಿ

೦ ಅನಾಮಧೇಯ

### ನಮ್ಮ ಪತ್ರಿಕೆಯ ಕಾನೂನು ಸಲಹೆಗಾರರು

ಸರ್ವಶ್ರೀ ಗೋಪಾಲ ಎಸ್. , ಟಿ.ನಾಗೇಂದ್ರ ಸುರಪುರ , ರಮೇಶ ಸೇಡಂಕರ, ಹೊನ್ನಾರೆಡ್ಡಿ ಹಾಗೂ ವಿಶ್ವನಾಥ ಮುಂಡಾಸ, ಸಂತೋಷ ಸತ್ಯಂಪೇಟೆ,ಬಸ್ಸನಗೌಡ ದೇಸಾಯಿ ದೇವದುರ್ಗ, ಹೇಮರಡ್ಡಿ ಕೊಂಗಂಡಿ .......

# ಅಗ್ನಿಯ ಅಂತರಂಗ









# ಚೆಡ್ಡಿ ಎಡಿಯೂರಗಳ ಯಡ್ಡಿ ಲಿಂಗಾಯತನೆ ?



ಸಂಪಾದಕೀಯ

ಯಡಿಯೂರಿ ಎಂಬ ಚೆಡ್ಡಿ ಚತುರ ಇತ್ತೀಚೆಗೆ ತಾನು ಭೇಟಿಕೊಟ್ಟ ಧಾರ್ಮಿಕ ಕಾರ್ಯಕ್ರಮಗಳಲೆಲ್ಲ ತನ್ನ ಸರಕಾರ ಅಸ್ತಿತ್ವಕ್ಕೆ ಬಂದರೆ ಸರಕಾರದ ಬಹುಪಾಲು ಹಣವನ್ನು ಧಾರ್ಮಿಕ ಮಠಗಳಿಗೆ ಕೊಡುವುದಾಗಿ ಘೋಷಿಸುತ್ತಿದ್ದಾನೆ. ಈ ಸನಾತನಿಗೆ ಮಠಗಳು ಮಂದಿರಗಳು ಬಹುದೊಡ್ಡ ಧಾರ್ಮಿಕತೆಯ ಕೇಂದ್ರಗಳಾಗಿ ಕಾಣಿಸಿದರೆ ಯಾರೂ ಆಶ್ಚರ್ಯಪಡಬೇಕಿಲ್ಲ. ಏಕೆಂದರೆ ಈ ಚೆಡ್ಡಿ ಬೆಳೆದಿರುವುದೆ ಸಂಘಿಗಳ ಸಂಘದಲ್ಲಿ.

ದುರಂತವೆಂದರೆ ಸಮಯ ಸಿಕ್ಕಾಗಲೆಲ್ಲ ತಾನು ಬಸವಣ್ಣನವರ ಅನುಯಾಯಿ ಎಂದು ಬೇರೆ ಹೇಳುವುದಲ್ಲದೆ , ತಾನೊಬ್ಬ ಲಿಂಗಾಯತ ಎಂಬುದನ್ನೂ ಜಾಹೀರು ಮಾಡಿಕೊಳ್ಳಲು ಬಯಸುತ್ತಾನೆ. ಈ ಮೂಲಕ ಲಿಂಗಾಯತರ , ಬಸವಣ್ಣನವರ ಅನುಯಾಯಿಗಳ ಅನುಕಂಪ ಹಾಗೂ ಓಟನ್ನು ಪಡೆಯಲು ಬಯಸುತ್ತಾನೆ. ಆದರೆ ಬಸವಣ್ಣನವರಿಗೂ ಇಂದಿನ ಬಹುತೇಕ ಮಠ ಮಾನ್ಯಗಳಿಗೂ ಏನೇನೂ ಸಂಬಂಧವೆ ಇಲ್ಲ. ಬಸವಣ್ಣನವರು ಮಠೀಯ ವ್ಯವಸ್ಥೆಯ ವಿರೋಧಿಯಾಗಿದ್ದರು. " ಉಳ್ಳವರು ಶಿವಾಲಯ ಮಾಡುವರು .ನಾನೇನು ಮಾಡಲಿ ಬಡವನಯ್ಯ" ಎಂದು ಹೇಳಿದವರು. "ದೇಹವನ್ನೆ ಅವರು ದೇವಾಲಯ" ಎಂದು ಸಾರಿದವರು.

ಲಿಂಗಾಯತರ ಮಠಗಳೆಂದು ಹೇಳಿಕೊಳ್ಳುವ ಇಂದಿನ ಬಹುತೇಕ ಮಠಗಳಲ್ಲಿ ಅಸ್ಪೃಶ್ಯತೆ ತಾಂಡವನಾಟ್ಯಮಾಡುತ್ತಿದೆ. ಮೇಲು ಕೀಳು ಭಾವನೆಗಳಿಂದ ನೋಡಲಾಗುತ್ತಿದೆ. ಮುಟ್ಟು – ಮೈಲಿಗೆಗಳಿವೆ. ಕರ್ಮಠ ಆಚರಣೆಗಳಾದ ಧೂಪ –ದೀಪ ಆರತಿ –ಕಾಯಿ –ಕರ್ಪೂರ ಲಕ್ಷದೀಪೋತ್ಸವಗಳ ಮೆರವಣಿಗೆ ಯಾವ ಎಗ್ಗಿಲ್ಲದೆ ಸಾಗಿವೆ. ಒಂದೊಂದು ಪೂಜೆಗೂ ಒಂದೊಂದು ನಮೂನೆಯ ರೇಟುಗಳನ್ನು ಫೀಕ್ಸ್ ಮಾಡಿಕೊಂಡು ಮುಗ್ಧ ಭಕ್ತರ ತಲೆಯನ್ನು ನುಣ್ಣಗೆ ಬೋಳಿಸುವ ಕೆಲಸಗಳಲ್ಲಿ ಅವರೆಲ್ಲ ನಿಷ್ಣಾತರಾಗಿದ್ದಾರೆ.

ಆ ಮಠದ ಸ್ವಾಮಿ, ಮಹಾಸ್ವಾಮಿ , ಜಗದ್ಗುರು (ಜಾಗದಗುರು)ವಾದರೋ ಅಕ್ಷರಶಃ ಆನೆಯಂತೆಯೆ ಭಾತುಕೊಂಡು ಕುಳಿತ್ತಿದ್ದಾರೆ. ಇನ್ನು ಮಠದಲ್ಲಿ ಇವರು ನಡೆಸುವ ಐಷಾರಾಮದ ಲೋಲುಪ ಜೀವನ ಯಾರೂ ನಡೆಸುವುದಿಲ್ಲ. ಮೇಲು ನೋಟಕ್ಕೆ ಬ್ರಹ್ಮಚಾರಿಗಳಾಗಿದ್ದೇವೆಂದು ಹೇಳುವ ಇವರೆಲ್ಲ ಅಪ್ಪಟ ಸಂಸಾರಿಗರಂತೆ ಕಳ್ಳ ಜೀವನ ನಡೆಸುತ್ತಿದ್ದಾರೆ. ಹೀಗಾಗಿ ಇಂದಿನ ಬಹುತೇಕ



ಮಠಗಳಲ್ಲಿ ತೊಟ್ಟಿಲುಗಳು ತೂಗುತ್ತಿವೆ. ತಮ್ಮ ಹಾದರವನ್ನು ಮುಚ್ಚಿಕೊಳ್ಳಲು ಮಠಾಧೀಶರು ನಾನಾ ನಮೂನೆಯ ಗಿಮಿಕ್ ಗಳನ್ನು ಮಾಡುತ್ತ ಜನರಿಗೆ ಮಕಮಲ್ ಟೋಪಿ ಹೊಲಿಸಿಕೊಂಡೆ ಕುಳಿತ್ತಿದ್ದಾರೆ.

ಇಂಥ ಮಠಗಳಿಗೆ ಯಡ್ಡಿ ಸರಕಾರದ ದುಡ್ಡು ಸುರಿಯುತ್ತಾನೆಂದರೆ ಏನರ್ಥ ? ಸರಕಾರದ ಖಜಾನೆಯಲ್ಲಿರುವ ದುಡ್ಡು ಯಾರದೋ ರೊಕ್ಕ ಎಲ್ಲಮ್ಮನ ಜಾತ್ರೆ ಎಂದು ತಿಳಿದುಕೊಂಡಿರುವ ಚೆಡ್ಡಿ ಚತುರನನ್ನು ಲಿಂಗಾಯತರು ಮೂಸಿಕೂಡ ನೋಡಬಾರದು. ಯಾಕೆಂದರೆ ಅವರೆಲ್ಲ ತಮ್ಮ ಆರಾಧ್ಯನಾದ ಬಸವಣ್ಣನವರಿಗೆ ಹಾಗೂ ಅವರ ತತ್ವಗಳಿಗೆ ಮಸಿಬಳಿದಂತಾಗುತ್ತದೆ. ಸನಾತನ ಪರಂಪರೆ ಎಂಬು ಗಬ್ಬು ತತ್ವಗಳನ್ನು ಅನುಚಾನವಾಗಿ ಜಾರಿಗೆ ತರಬೇಕು ಎಂಬ ಅಜೆಂಡಾದೊಂದಿಗೆ ಹೊರಟಿರುವ 'ದಾರ'ಗಳಿಗೆ ಯಡ್ಡಿ ದಾಳವಾಗುತ್ತಿರುವ ಕಬರು ಇಲ್ಲದಿರುವುದು ದುರಂತದ ಸಂಗತಿಯಾಗಿದೆ.

ಸಂಘಿಗಳ ಹುನ್ನಾರಗಳನ್ನು ಸ್ಪಷ್ಟವಾಗಿ ತಿಳಿಯದ ಕೆಲವು ಜನ ಲಿಂಗಾಯತ (?)ರು ಕೂಡ ಬಿಜೆಪಿಯ ಜೊತೆ ಹೆಜ್ಜೆ ಹಾಕುತ್ತಿರುವುದು ತಮ್ಮ ಗೋರಿಯನ್ನು ತಾವೆ ತೋಡಿಕೊಂಡಂತೆ. ಯಡ್ಡಿಯ ಹಿಂದೆ ಜಾಬಾದಿ ಸಂಘಿಗಳ ಹುನ್ನಾರಗಳು ಕೆಲಸ ಮಾಡುತ್ತಿವೆ. ಯಡ್ಡಿಯ ಬ್ರೇನ್ ವಾಶ್ ಆಗಿಬಿಟ್ಟಿದೆ. ಆದ್ದರಿಂದ ಈತ ಅಸಲಿ ಲಿಂಗಾಯತನಾಗಿ ಉಳಿದಿಲ್ಲ. ಅಂದಮೇಲೆ ಬಸವಣ್ಣನವರ ಹೆಸರನ್ನು ಎತ್ತುವ ಯಾವ ನೈತಿಕತೆಯೂ ಯಡ್ಡಿಗೆ ಇಲ್ಲ. ಸನಾತನ ಪರಂಪರೆ ಎಂಬ ಹೆಸರಿನ ಮೇಲೆ ಮತ್ತದೆ ಮನುವಿನ ಮೊಮ್ಮಕ್ಕಳ ಅಟಾಟೋಪ ಜರುದಂತೆ ತಡೆಯಬೇಕೆಂದರೆ ನಾವು ನೀವೆಲ್ಲ ಅನಿವಾರ್ಯವಾಗಿ ಇಂಥ ಬೂಸಿಗಳನ್ನು ಆದಷ್ಟು ದೂರ ಇಟ್ಟುಕೊಳ್ಳಬೇಕು. ಅದು ಇಂದಿನಿಂದಲೆ ಮಾಡೋಣ ! ಏನಂತೀರಿ ?

## ನಿಜಕ್ಕೂ ನಾನು ಧನ್ಯ

'ಅಗ್ನಿ ಅಂಕುರ'ದ ಎರಡನೆಯ ಸಂಚಿಕೆಯನ್ನು ನೀವೆಲ್ಲ ಸ್ವೀಕರಿಸಿದ ರೀತಿ ನೋಡಿದರೆ ನನಗೆ ನಿಜಕ್ಕೂ ಖುಷಿಯಾಗುತ್ತದೆ. ಪತ್ರಿಕೆ ಮಾರುಕಟ್ಟೆಗೆ ಬಂದ ನಾಲ್ಕಾರು ದಿನಗಳಲ್ಲೆ ಅದು ಮಾರುವ ಭರಾಟೆ ನೋಡಿ ದಂಗಾಗಿ ಹೋದೆ. ಇದರಿಂದ ಉತ್ತೇಜಿತನಾಗಿ ನನ್ನ ಓದುಗರಿಗೆ ಇನ್ನಷ್ಟು - ಮತ್ತಷ್ಟು ಇಷ್ಟವಾಗುವ ಆಪ್ತನಾಗಿರುವ ಬರವಣಿಗೆಯನ್ನು ಕೊಡಬೇಕಿಂದಿದ್ದೇನೆ.

ಒಟ್ಟಿನಲ್ಲಿ : ಯಾವುದೆ ಸ್ವಾರ್ಥ ಇಟ್ಟುಕೊಳ್ಳದೆ "ಯಾವ ಸಿದ್ದಪ್ಪನಿಗೆ ಸಿಟ್ಟು ಬಂದರೂ ಸೈ ಇದ್ದದ್ದನ್ನು ಇದ್ದಂತೆ ನಿಮಗೆಲ್ಲ ಬರೆದು ತಿಳಿಸುತ್ತೇನೆ". ಏಕೆಂದರೆ ನೀವೆಲ್ಲ ಇದ್ದದ್ದನ್ನು ಇದ್ದಂತೆ ಓದಬೇಕು ಎಂದು ಅಪೇಕ್ಷಿಸುವವರು. ಸಮಾಜದಲ್ಲಿ ಬದಲಾವಣೆ ಬಯಸುವವರು. ಹೊಸ ಕನಸುಗಳನ್ನು ಕಾಣುವವರು. ನಿಮ್ಮ ಕನಸುಗಳಿಗೆ 'ಪತ್ರಿಕೆ' ಭೂಮಿಕೆಯಾಗುತ್ತದೆ. ನಿಮ್ಮ ಪ್ರೀತಿಗೆ ನಾನು ಧನ್ಯ.

o ವಿಶ್ವಾರಾಧ್ಯ ಸತ್ಯಂಪೇಟೆ



ಬಹುಶಃ ವೀರಭದ್ರಯ್ಯ ಸ್ವಲ್ಪ ತೀರ್ಥ (ಥ್ರೀ ಎಕ್ಸ ರಮ್) ಸೇವಿಸಿರಬೇಕು. ಕಣ್ಣು ಕೆಂಪಗಾಗಿದ್ದವು. ಮಾತು ತೊದಲುತ್ತಿದ್ದವು. ನಡವಳಿಕೆಗಳು ಚಿತ್ರ ವಿಚಿತ್ರವಾಗಿದ್ದವು. ಹರೆಯದ ಹೆಣ್ಣು ಮಕ್ಕಳು ಕಾಣುತ್ತಲೇ ವೀರಭದ್ರಯ್ಯನ ನಿಜರೂಪ ವ್ಯಕ್ತವಾಗುತ್ತಿತ್ತು. ಸ್ವಾಮಿಯ ಗತ್ತುಗಾರಿಗೆ ಮಾಯವಾಗಿ ಅಲ್ಲಿ ದೈನಸಿ ನಡವಳಿಕೆ ತೂರಿಕೊಳ್ಳುತ್ತಿತ್ತು.ಹೆಣ್ಣು ಮಕ್ಕಳು ಬಯಸದೇ ಇದ್ದರೂ ಅವರ ಬಗ್ಗೆ ಅತಿಯಾದ ಕಾಳಜಿ ವ್ಯಕ್ತವಾಗುತ್ತಿತ್ತು.

# ಅಂಕಲಗಿ ಮಠದಲ್ಲೊಬ್ಬ ಡೋಂಗಿ ಸ್ವಾಮಿ

ಕಲಬುರ್ಗಿ ಜಿಲ್ಲೆಯ ಲಫಂಗ ಸ್ವಾಮಿಗಳ ಚರಿತ್ರೆ ಇತ್ತೀಚೆಗೆ " ಲಂಕೇಶ್ " ಪತ್ರಿಕೆಯಲ್ಲಿ ಬಯಲಾಗುತ್ತಲೇ "ರಾಯಚೂರು ಜಿಲ್ಲೆಯ ಇಂಥವೇ ಐನಾತಿ ಸ್ವಾಮಿಗಳ ಬಗ್ಗೆ ನೀವು ಯಾಕೆ ಬರೆಯುತ್ತಿಲ್ಲ ?" ಎಂದು ಪತ್ರಿಕೆಯ ಜಾಗೃತ ಓದುಗರು ನಮ್ಮನ್ನು ಫೋನ್ ಮೂಲಕ ದಬಾಯಿಸುತ್ತಲೇ ಇದ್ದರು. ಆದರೆ ಆ ಸಮಯ ಕೂಡಿ ಬಂದಿರಲಿಲ್ಲ. ಕೊನೆಗೂ ಅದೊಂದು ಅಮವಾಸೆಯ ರಾತ್ರಿಯೆ ಲಿಂಗಸೂಗೂರು ತಾಲೂಕಿನ ಮುದಗಲ್‌ದಿಂದ ೧೨ ಕಿ.ಮೀ.ದೂರ ಇರುವ 'ಅಂಕಲಗಿ' ಮಠಕ್ಕೆ ಹೋಗಲೇ ಬೇಕೆಂದು ನಿರ್ಧರಿಸಿದೆ.ಆದರೆ ಮುದಗಲ್ ದಿಂದ 'ಅಂಕಲಗಿ ಮಠ'ಕ್ಕೆ ಹೋಗುವ ಬಸ್ ಆಗಲೇ ಹೋಗಿ ಆಗಿತ್ತು. ಆದರೂ ಅಂಕಲಗಿ ಮಠಕ್ಕೆ ಹೋಗುವ ಭಕ್ತ(?)ರು ಬಸ್ ನಿಲ್ದಾಣದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಇರುವುದು ಕಾಣಿಸಿತು.ಅಂಕಲಗಿ ಮಠದ ಸ್ವಾಮಿಗಳು ಬಹಳಷ್ಟು ಪವಾಡಗಳನ್ನು ಮಾಡಿದ್ದಾಗಿ ಹೇಳಿಕೊಳ್ಳುವ ಜನಗಳ ಎದುರಿಗೆ ನಾನು ಸಾವಕಾಶವಾಗಿ " ಇಷ್ಟೊಂದು ಜನ ಅಂಕಲಗಿ ಮಠಕ್ಕೆ ಹೋಗುವವರೆ ಇರುವಾಗ ಮಠದಲ್ಲಿರುವ ನಿಮ್ಮ ಸ್ವಾಮಿಗೆ ಇದು ಗೊತ್ತಾಗಿ , ಕೂಡಲೇ ನಮಗೊಂದು ಬಸ್ ವ್ಯವಸ್ಥೆ ಮಾಡಬಾರದೆ ? "ಎಂದು ಹೇಳುತ್ತಿರುವಂತೆ ಆತ ನನ್ನನ್ನು ಕೆಕ್ಕರಿಸಿದ ಕಂಗಳಿಂದ ದುರದುರನೆ ನೋಡತೊಡಗಿದ. ಆತನೊಂದಿಗಿರುವ ಕೆಲವರು ನನ್ನ ಮಾತೂ 'ವಾಜಮಿ' ಅನಿಸಿ ಮೌನ ಸಮ್ಮತಿಯನ್ನು ಸೂಚಿಸಿದರು.

ಬಸ್ ನಿಲ್ದಾಣದ ಗಬ್ಬು ವಾಸನೆ ಕುಡಿಯುತ್ತ ನಿಲ್ಲುವುದರಲ್ಲಿ ಯಾವುದೇ ಅರ್ಥವಿಲ್ಲವೆಂದು ಬಗೆದ ನಾನು ಸಾವಕಾಶವಾಗಿ ಮುಖ್ಯ ರಸ್ತೆಗೆ ಬಂದು ಅಂಕಲಗಿ ಮಠಕ್ಕೆ ಹೋಗುವುದಕ್ಕೆ ಯಾವುದಾದರೂ ವಾಹನ ಸಿಗಬಹುದೆ ? ಎಂದು ಲೆಕ್ಕಾಚಾರ ಹಾಕುತ್ತ



ಕನ್ನಡದ ಹೆಮ್ಮೆಯ ನಟ, ತಮಿಳು ಚಿತ್ರಗಳ ಆರಾಧ್ಯ ದೈವ ಎಂದೆ ಭಾವಿಸಿರುವ , ನಟನಾ ಕೌಶಲ್ಯವನ್ನು ಈಗಾಗಲೇ ಹಲವು ಚಿತ್ರಗಳ ಮೂಲಕ ಜಾಹೀರು ಪಡಿಸಿರುವ "ಪ್ರಕಾಶರೈ ಇಲ್ಲಿಗೆಕಪ್ಪ ಬಂದ್ರು ?!"

ನಡೆದೆ.ಅಂದಂತೆ ಐದತ್ತು ನಿಮಿಷಗಳಲ್ಲಿಯೇ ಸಾಮಾನುಗಳನ್ನು ಹೊತ್ತೊಯ್ಯುವ ಸಣ್ಣ 'ಟಂಟಂ' (ಗೂಡ್ಸ ಗಾಡಿ) ಒಂದು ಅಂಕಲಗಿಗೆ ಹೋಗುತ್ತದೆಂದು ಗೊತ್ತಾಗುತ್ತಲೇ ಯಾವುದೇ ಮೀನಮೇಷಮಾಡದೆ ಆ ಗಾಡಿ ಹತ್ತಿದೆ.ರಾತ್ರಿ ೧೦ ಗಂಟೆಯಾಗಿದ್ದರಿಂದ ಮುದಗಲ್ಲಿನ ಅಂಗಡಿ ಮುಂಗಟ್ಟುಗಳೆಲ್ಲ ಆಗಲೇ ಮುಚ್ಚಿಕೊಂಡಿದ್ದವು. ಜನರ ಓಡಾಟವೂ ತೀರಾ ಕಡಿಮೆ ಆಗಿತ್ತು. ಆ ನಿಶಾಚರ ಮೌನವನ್ನು ಭೇದಿಸಿ ಸದ್ದು ಮಾಡುತ್ತ ಹೊರಟ ಟಂಟಂ ಕತ್ತಲನ್ನು ಸೀಳಿ ಮುನ್ನಡೆದಿತ್ತು.ಟಂಟಂ ಮೇಲೇರಿ ನಿಂತ ನಾವು ಹತ್ತೆಂಟು ಜನ ಅಕ್ಷರಶಃ ಕುರಿಗಳೋಪಾದಿಯಲ್ಲೇ ನಿಂತಿದ್ದೆವು.'ಜಾನತಾಪೂರ ' , 'ಬನ್ನಿಗೋಳ್ 'ಎಂಬೆರಡು ಊರುಗಳನ್ನು ದಾಟಿಕೊಂಡು ಅಂಕಲಗಿ ಮಠದ ಹತ್ತಿರಕ್ಕೆ ಬಂದು ನಿಂತಾಗ ರಾತ್ರಿ ೧೧ ಗಂಟೆ.

ನನಗೆ ನಿಜಕ್ಕೂ ದಿಗ್‌ಭ್ರಮೆಯಾಯ್ತು. ರಾತ್ರಿ ೧೧ ಗಂಟೆಯ ಸಮಯದಲ್ಲೂ ಅಂಕಲಗಿಯ ಮಠದ ಅಂಗಳದ ತುಂಬೆಲ್ಲ ಜನವೇ ಜನ. ವೈಟ್ ಕಾಲರನ ಜನರಿಂದ ಹಿಡಿದು ಜನಸಾಮಾನ್ಯನವರೆಗೂ ಅಲ್ಲಿ ನೆರೆದಿದ್ದರು. ತರ ತರದ ಫೋರವಿಲ್ಹರ್ . ಟೂವಿಲ್ಹರಗಳು ಸಾಕಷ್ಟು ಸಂಖ್ಯೆಯಲ್ಲಿ ಕೂಡಿದ್ದವು.ಊದುಬತ್ತಿ , ಕಾಯಿ - ಕರ್ಪೂರ ,ಫೋಟೋಗಳ ನಾಲ್ಕಾರು ಅಂಗಡಿಯ ಮುಂದೆ ಜನ ಸಾಲುಗಟ್ಟಿ ನಿಂತು ಅವನ್ನು ಖರೀದಿಸುತ್ತಿದ್ದರು. ವ್ಯಾಪಾರ ಭರ್ಜರಿಯಾಗಿ ನಡೆದಿತ್ತು. ನಾನೊಂದು ಕಾಯಿ ಖರಿದಿಸುತ್ತ ಸಾವಕಾಶವಾಗಿ ಆ ಅಂಗಡಿಯವನಿಗೆ "ಈ ಮೂರ್ನಾಲ್ಕು ಅಂಗಡಿಗಳು ಯಾರಿಗೆ ಸೇರಿದವು?" ಎಂದು ಕೇಳಿದೆ. ಆತ ಸಹಜವಾಗಿ "ಎಲ್ಲಾ ಮುತ್ಯಾವ್ರರೀ..... ಅವ್ರ ತಮ್ಮ ಸಣ್ಣಪ್ಪೋರು ನೋಡಿಕ್ಯಂಡ ಹೋಗತಾರ "ಅಂದ."ಪ್ರತಿ ಅಮವಾಸೆಗೂ ಎಷ್ಟು ಕಾಯಿ ಖರ್ಚಾಗುತ್ತವೆ ? "ಎಂದೆ. ಆತ" ೧೦ ಸಾವಿರ ತನಕ ಆಗಬಹುದು "ಅಂದ. ಅದನ್ನು ದಾಟಿ ಮಠದ ಮುಖ್ಯ ದ್ವಾರಕ್ಕೆ ಬಂದು ನಿಲ್ಲುತ್ತಲೇ ಅಲ್ಲಿ ಸುಮಾರು ೧೫೦ ರಿಂದ ೨೦೦ ಚೀಲಗಳಷ್ಟು ಜೋಳದ ರಾಶಿ ಹರವಿ ಹಾಕಿದ್ದರು. "ಈ ಜೋಳದ ರಾಶಿ ಯಾರಿಗೆ ಸಂಬಂಧಿಸಿದವು ? "ಎಂದು ಮತ್ತೊಬ್ಬನನ್ನು ಕೇಳಿದೆ. "ಇವು ಭಕ್ತರು ಮಠಕ್ಕೆ ಕೊಟ್ಟವು ! "ಎಂದು ಸಲೀಸಾಗಿ ಹೇಳುತ್ತ ಮುನ್ನಡೆದ. ನಾನು ಅವನನ್ನು ಹಿಂಬಾಲಿಸುತ್ತ ಅಪ್ಪೋರನ್ನು ಹುಡುಕುತ್ತ ಮುನ್ನಡೆದೆ.

ಮಠದ ಅಂಗಳದಲ್ಲಿ ಬಂದು ನಿಂತಂತೆ ಮೊದಲು ಕಾಣಿಸಿದರೂ ಈಗ ನಾನು ನಿಂತಿರುವುದು ದೊಡ್ಡ ಮನೆಯ ಮುಂದೆ ಎಂದು ಅನಿಸದೆ ಇರಲಿಲ್ಲ.ಏಕೆಂದರೆ ಮಠದ ಆವರಣದಂತೆ ಮುಂದುಗಡೆ ಕಾಣಿಸಿದರೂ , ಅದರ ಹಿಂದುಗಡೆ ಮನೆಯ ವಾತಾವರಣವೇ ಇತ್ತು. ಮನೆಯ ಬಲಗಡೆ ವೈಭವೋಪೇತವಾಗಿ ರಾರಾಜಿಸುತ್ತಿದ್ದ ರಾಜ ಮಹಾರಾಜರ ಖುರ್ಚಿಯೊಂದು ವಿರಾಜಮಾನವಾಗಿ ವಿಜೃಂಭಿಸುತ್ತಿತ್ತು. ಅದರ ಎರಡೂ ತೋಳುಗಳಲ್ಲಿ ಸಿಂಹದ ಆಕೃತಿಯ ಗೊಂಬೆಗಳಿದ್ದವು. ಖುರ್ಚಿಯ ಮೇಲ್ಗಡೆ ರೇಶ್ಮೆಯ ಛತ್ರಿ ಥಳ ಥಳ ಹೊಳೆಯುತ್ತಿತ್ತು. ಅದರ ಎಡಗಡೆ 'ನಿರುಪಾಧೀಶ್ವರರ ಗದ್ದುಗೆ 'ಇದೆ. ಬಲಗಡೆ ದೇವಿಯ ಮಂದಿರವಿದೆ. ಹಿಂದುಗಡೆ ವಿಶಾಲವಾದ ಹೊನ್ನಪ್ಪನ ಕೆರೆ ಇದೆ. ಇದೆಲ್ಲವನ್ನೂ ನನ್ನ ಕಣ್ಣ ಕ್ಯಾಮರಾದಲ್ಲಿ



ಸೆರೆ ಹಿಡಿಯುತ್ತ ಮುನ್ನಡೆಯುತ್ತಿರುವಂತೆ ಒಮ್ಮಿದೊಮ್ಮೆ ಜಯಘೋಷ
ಅಷ್ಟುಹೊತ್ತು ಸುತ್ತ ಮುತ್ತ ನೆರೆದು ನಿಂತಿದ್ದ ಭಕ್ತರೆಲ್ಲ ಆ ನಿರುಪಾಧಿ
ಪ್ರಾಂಗಣದ ಎದುರಿಗೆ ಇರುವ ವಿಜೃಂಭಿತ ಖುರ್ಚಿಯ ಹತ್ತಿರ ಜಮಾ
ಸ್ವಾಮಿಗಳು ಬಂದಿರಬೇಕು... ಅದಕ್ಕೆ ಜನ..... ಅನ್ನಿಸಿ ನಾನೂ ಆ ಕಡೆ
ಕಡೆಗೆ ನೋಡಿದೆ. ನಾನು ಒಂದು ಕ್ಷಣ ತಟಸ್ಥವಾಗಿ ನಿಂತುಬಿಟ್ಟೆ !

ಕನ್ನಡದ ಹೆಮ್ಮೆಯ ನಟ, ತಮಿಳು ಚಿತ್ರಗಳ ಆರಾಧ್ಯ ದೈವ
ಕೌಶಲ್ಯವನ್ನು ಈಗಾಗಲೇ ಹಲವು ಚಿತ್ರಗಳ ಮೂಲಕ ಜಾಹೀರು ಪಡಿಸಿ
ಬಂದ್ರು ?!" ಎಂದು ಅವಾಕ್ಕಾದೆ. ' ಯಾವುದಾದರೂ ಫಿಲ್ಮ ಶ್ಯೂಟ
ನನ್ನಲ್ಲಿ ನಾನೇ ತರ್ಕಿಸಿದೆ. ತೀವ್ರ ಕುತೂಹಲದಿಂದ ಸಮೀಪಕ್ಕೂ ಹೋಗಿ ನೆ
ಕ್ಷಣ ನಂಬಲಾರದವನಾದೆ. ಹೌದು ಥೇಟ ಪ್ರಕಾಶ್ ರೈಯಂತೆ ಕಂಡರೂ ಆತ ಪ್ರಕಾಶ ರೈ ಆಗಿರಲಿಲ್ಲ. ಬದಲಾಗಿ ಈ ಮಠದ ಸ್ವಾಮಿ ವೀರಭದ್ರಯ್ಯನಾಗಿದ್ದ ! ೪೦-೪೫ ರ ವಯಸ್ಸಿನ ಕಟ್ಟು ಮಸ್ತಾದ ಆಳು. ಮೈ- ಕೈ ತುಂಬಿಕೊಂಡು ಘೋಗದಸ್ತಾಗಿ ಬರಬರನೆ ಬೆಳೆದ ಬಾಳೆ ದಿಂಡಿನಂತೆ ಕಾಣುತ್ತಿದ್ದ. ಬಿಳಿಯ ಧೋತ್ರ - ಅದೇ ಬಣ್ಣದ ತುಂಬು ತೋಳಿನ ಅಂಗಿತೊಟ್ಟದ್ದ ಸ್ವಾಮಿ ತಲೆಗೆ ಮಾತ್ರ ಹಸಿರು ಬಣ್ಣದ ರುಮಾಲು ಸುತ್ತಿದ್ದ. ಕಾಂಗ್ರೇಸ ಪಕ್ಷದ ನೇತಾರನಂತೆ ತನ್ನ ಬಲಗೈಯನ್ನು ಮೇಲಕ್ಕೆತ್ತಿ ಜನಗಳಿಗೆ ಆಶೀರ್ವದಿಸುತ್ತಲೇ ಇದ್ದ. ಜನಗಳಂತೂ ಆತನ ಆಶೀರ್ವಾದದಿಂದ ತಮ್ಮೆಲ್ಲ ಬವಣೆಗಳು - ಸಂಕಟಗಳು ಪರಿಹಾರಗೊಂಡವು ಎಂದು ಸಂಭ್ರಮಿಸುತ್ತ ಅಪ್ಪಾವರ ಜೋಳಿಗೆಗೆ ಭಕ್ಷಸು ಹಾಕುತ್ತ ಮುನ್ನಡೆದಿದ್ದರು.ಅವರ ಕಾಲುಗಳನ್ನು ಸಂಭ್ರಮಿಸುತ್ತ ಹಿಡಿಯುತ್ತಿದ್ದರು.ಖುರ್ಚಿಯ ಪಕ್ಕದಲ್ಲಿಯೇ ಇದ್ದ ಬೂದಿಯನ್ನು ಜನ ಭಯ - ಭಕ್ತ(?)ಗಳಿಂದ ಹಣೆಗೆ ಹಚ್ಚಿಕೊಳ್ಳುತ್ತಲೋ , ಕಾಗದದ ಚೀಟುಗಳಲ್ಲಿ ಕಟ್ಟಿಕೊಳ್ಳುತ್ತಿದ್ದರು.

ಬಹುಶಃ ವೀರಭದ್ರಯ್ಯ ಸ್ವಲ್ಪ ತೀರ್ಥ (ಥ್ರೀ ಎಕ್ಸ ರಮ್) ಸೇವಿಸಿರಬೇಕು. ಕಣ್ಣು ಕೆಂಪಗಾಗಿದ್ದವು. ಮಾತು ತೊದಲುತ್ತಿದ್ದವು. ನಡವಳಿಕೆಗಳು ಚಿತ್ರ ವಿಚಿತ್ರವಾಗಿದ್ದವು. ಹರೆಯದ ಹೆಣ್ಣು ಮಕ್ಕಳು ಕಾಣುತ್ತಲೇ ವೀರಭದ್ರಯ್ಯನ ನಿಜರೂಪ ವ್ಯಕ್ತವಾಗುತ್ತಿತ್ತು. ಸ್ವಾಮಿಯ ಗತ್ತುಗಾರಿಗೆ ಮಾಯವಾಗಿ ಅಲ್ಲಿ ದೈನಸಿ ನಡವಳಿಕೆ ತೂರಿಕೊಳ್ಳುತ್ತಿತ್ತು.ಹೆಣ್ಣು ಮಕ್ಕಳು ಬಯಸದೇ ಇದ್ದರೂ ಅವರ ಬಗ್ಗೆ ಅತಿಯಾದ ಕಾಳಜಿ ವ್ಯಕ್ತವಾಗುತ್ತಿತ್ತು.ಗಜೇಂದ್ರಗಡದಿಂದ ಬಂದಿದ್ದ ಸಿದ್ದಪ್ಪ ಎಂಬ ವ್ಯಕ್ತಿಯೋರ್ವ " ಅಜ್ಜೋರೆ ನೀವು ಹೇಳಿದ ಮಟ್ಕಾ ನಂಬರ್ ಹತ್ತಿದೆ, ಮಠಕ್ಕೆ ತನ್ನ ಕೈಲಾದ ಸೇವೆ ಸಲ್ಲಿಸಲು ಬಂದಿರುವೆ "ಎಂದ. ಇದೇ ಸಂದರ್ಭವೆಂದು ಬಗೆದು ದೂರದಲ್ಲಿ ನಿಂತಿದ್ದ ಹಿರೆಆಳ್ಳಳ್ಳಿಯ ಮತ್ತೊಬ್ಬ ' ತಾಮ್ರದ ಆಂಡ್ಯಾ 'ವನ್ನು ಮೈಮೇಲೆ ಹೊತ್ತುಕೊಂಡು ತಂದು " ತಮ್ಮ ಆಶೀರ್ವಾದದ ಬಲದಿಂದ ನನಗೆ ನಂಬರ್ ಹತ್ತಿತ್ತು. ಇದು ತಮ್ಮ ದಾಸೋಹಕ್ಕೆ ಎಂದು ಅರ್ಪಿಸಿ " ಕೃತಾರ್ಥನಾಗುವವನಂತೆ ನಿಂತಿದ್ದ.

ಈ ಸಂದರ್ಭಗಳಿಂದ ಬೀಗಿ ನಿಂತ ವೀರಭದ್ರಯ್ಯ ಮತ್ತಷ್ಟು ಠೇಂಕಾರದ ಧ್ವನಿಯಲ್ಲಿ ಯಾರನ್ನೋ ಉದ್ದೇಶಿಸಿ , ಮತ್ತಾರತ್ತಲೋ ನೋಡುವವನಂತೆ ನಟಿಸುತ್ತ "ಮುಂದಿನ ತಿಂಗಳು ೨೮ ರಂದು ನಿಮ್ಮ ಮನೆಗೆ ಬರುತ್ತೇನೆ "ಎಂದು ಹೇಳುತ್ತಿದ್ದ. ಸುತ್ತ ಮುತ್ತ ನೆರೆದಿದ್ದ ಕೆಲವು ಕುರಿಗಳು ' ೨೮ 'ರ ಸಂಖ್ಯೆಯನ್ನೆ "ಮಟ್ಕಾ ನಂಬರ" ಎಂದು ಪರಿಭಾವಿಸಿ ಸಂಭ್ರಮಿಸುತ್ತಿದ್ದವು. ಆ ಪೀಠದಲ್ಲಿ ಕುಳಿತಿರುವಷ್ಟು ಹೊತ್ತು ಪ್ರಕಾಶ್ ರೈ ಊರ್ಫ ವೀರಭದ್ರಯ್ಯ ಹಲವಾರು 'ಗಿಮಿಕ್ ' ಗಳಿಂದ ಜನರನ್ನು ಮೋಸಪಡಿಸಿದ್ದ. ಅಸ್ಪಷ್ಟ ಮಾತುಗಳ ಮೂಲಕ ಜನರನ್ನು 'ಗಲಿಬಿಲಿ' ಗೊಳಿಸಿದ್ದ. ಒಗಟಿನ ಉತ್ತರಗಳಿಂದ ಗೊಂದಲಕ್ಕೆ ಈಡುಮಾಡಿದ್ದ. ಮಾರ್ಮಿಕ ನಗೆಯಿಂದ ಕೆಲವರಿಗೆ ಮತ್ತೂ ಬರಿಸಿದ್ದ. ಒಟ್ಟನಲ್ಲಿ ತನ್ನ ವಿಚಿತ್ರವಾದ ನಡವಳಿಕೆಗಳ ಮೂಲಕ ಜನತೆಯನ್ನು ದಂಗುಬಡಿಸಿ ,ಅವರನ್ನು ಪ್ರಭಾವಿಸಿದ್ದ.

ಇವನ ನಾಟಕ ನೋಡುತ್ತ ಕುಳಿತರೆ ಇದಕ್ಕೆ ಕೊನೆ ಮೊದಲೆ ಇರುವುದಿಲ್ಲ ಎಂದು ಭಾವಿಸಿ ಅರಮನೆಯಂತೆ ಮನೆಯ ಒಳ ಹೊಕ್ಕು ನೋಡಲು ನಾನು ಮುಂದಾದೆ. ಆಗ ಕೆಲವರು " ಅಪ್ಪಾವ್ರು

ನಡವಳಿಕೆಗಳ ಮೂಲಕ ಜನತೆಯನ್ನು ದಂಗುಬಡಿಸಿ ,ಅವರನ್ನು ಪ್ರಭಾವಿಸಿದ್ದ.

ಇವನ ನಾಟಕ ನೋಡುತ್ತ ಕುಳಿತರೆ ಇದಕ್ಕೆ ಕೊನೆ ಮೊದಲೆ ಇರುವುದಿಲ್ಲ ಎಂದು ಭಾವಿಸಿ ಅರಮನೆಯಂತೆ ಮನೆಯ ಒಳ ಹೊಕ್ಕು ನೋಡಲು ನಾನು ಮುಂದಾದೆ. ಆಗ ಕೆಲವರು " ಅಪ್ಪಾವ್ರು ಇಲ್ಲೇ ಇರುವಾಗ ಅಲ್ಯಾಕ್ಯಕ ನಡದಿರ್‍ರೀ....." ಎಂದು ಒಬ್ಬ ರಾಗ ಎಳೆದ. ನಾನವನ ಮಾತನ್ನು ಕಡೆಗಣಿಸಿ ಮುನ್ನಡೆದದ್ದು ಕಂಡು ಅವನೆ ಮತ್ತೆ "ಅವ್ವಾವ್ರಿಗೆ ಭೇಟಿ ಆಗ್ತಿರೇನ್ರೀ... !? ಹೋಗ್ರಿ.... ಅವ್ರು ಅಲ್ಲೇ ಕುಂತಾರ ನೋಡ್ರಿ....... "ಅಂದ. ನಾನು ಆ ಅಗಂತುಕನತ್ತ ನೋಡದೆ ಮುನ್ನಡೆದೆ.ಮನೆಯ ಎಡ ಬಲ ದ ಜೇಳಿಂದ್ರದಲ್ಲಿ ನೂರಾರು ಬತ್ತದ ಚೀಲಗಳ ನಿಟ್ಟು ಒಟ್ಟಲಾಗಿತ್ತು. ಪತ್ತೆಂಟು ಜನ ಆ ರಾಶಿ ಅಕ್ಕಿಯನ್ನು ಹಸನು ಮಾಡುವುದು , ಕೇರುವುದು ನಡೆದೇ ಇತ್ತು. ಇವರೆಲ್ಲ ಯಾರಿರಬಹುದು ? ಎಂದು ಕುತೂಹಲಕ್ಕೆ ಕೇಳಲಾಗಿ , ಸುತ್ತ ಮುತ್ತಲ ಊರಿನ ನಾನಾ ಭ್ರಮೆಗಳಿಗೆ ಒಳಗಾಗಿ , ಉಗಸೆಟ್ಟೆ ಸೇವೆಗೆ ಬಂದು ನಿಂತ ಅಭಾಗಿನಿಯರು ಅವರಾಗಿದ್ದರು.

ಅವರನ್ನು ಕನಿಕರದಿಂದ ನೋಡುತ್ತ ನನ್ನಷ್ಟಕ್ಕೆ ನಾನು ದಡ ದಡನೆ ಮಾಳಿಗೆ ಮೇಲೆ ಏರುವ ಪಾವಟಿಗೆಗಳನ್ನು ಹತ್ತುತ್ತ ನಡೆದೆ. ಅಲ್ಲಿ ಮೂರ್‍ನಾಲ್ಕು ರೂಮ್ ಗಳಿವೆ. ಈ ವೀರಭದ್ರಯ್ಯನ ಸುಮಾರು ೧೩ ವರ್ಷದ ಮಗ ಬಸವರಾಜ ತನ್ನ ತಂದೆಯಂತೆ ಹಸಿರು ಪಟಗಾ ಸುತ್ತಿಕೊಂಡು ಮರೀ ಮುತ್ತ್ಯಾ ಆಗಿದ್ದ. ವೀರಭದ್ರಯ್ಯನ ತಮ್ಮ ಫಕೀರಸ್ವಾಮಿಯೂ , ಅಣ್ಣನ ಮಗ ಬಸವರಾಜ , ಹೆಂಡತಿ ಸುಗಂಧಮ್ಮ,ವೀರಭದ್ರಯ್ಯನ ಮಡದಿ ಪುಷ್ಪಲತಾ, ಸುವರ್ಣಮ್ಮ ,ಶ್ರೀದೇವಿ, ನಿರುಪಾದ, ಗುಲಬರ್ಗಾದಿಂದ ಬಂದಿದ್ದ ಇವರ ಸಡ್ಡಕರು,ಬೀಗರು – ಬಿಜ್ಜರಿಂದ ತುಂಬಿದ ಮಾಳಿಗೆಯ ಅಟ್ಟ ಬರ್ತಿಯಾಗಿತ್ತು. ಅವರೆಲ್ಲರೂ ಅದೇ ಆಗ ಟೀವಿಯಲ್ಲಿ ಬರುತ್ತಿದ್ದ "ಮುಂಗಾರು ಮಳೆ "ಯ ಹಾಡು " ಕುಣಿದೂ ಕುಣಿದೂ ಬಾರೆ...... ಜೀವಕೆ ಜೀವ ತಂದವಳೇ........" ಅಲೆ ಅಲೆಯಾಗಿ ತೇಲಿ ಬರುತ್ತಿತ್ತು.ಆಗಂತುಕನಾದ ನನ್ನನ್ನು ನೋಡಿದ ಫಕೀರಸ್ವಾಮಿ ದಡಕ್ಕನೆ ಗಡಬಡಿಸಿ ಎದ್ದು , " ಯಾರ್‍ರೀನೀವು.....? ಇಲ್ಲಿಗ್ಯಾಕ ಬಂದ್ರೀ... ತಿಳಿಯಾದಿಲ್ಲೇನು.....?" ಎಂದು ಭುಗುಲು ಬಿದ್ದು ಒಂದೇ ಉಸುರಿಗೆ ಕೇಳುತ್ತ ಹೋದ.ನನ್ನ ದಿವ್ಯ ಮೌನ ,ತದೇಕ ಚಿತ್ತದ ದೃಷ್ಟಿ ಅವನ ಜಂಗಾಬಲವನ್ನೇ ಉಡುಗಿಸಿರಬೇಕು , ಸುಮ್ಮನಾದ.



ಅವನ ಜೊತೆ ಮಾತಾಡುವುದಕ್ಕೆ ಏನು ಉಳಿದಿರಲಿಲ್ಲವಾದ್ದರಿಂದ ಮತ್ತೆ ದಡದಡನೆ ಪಾವಟಿಗೆ ಇಳಿದು ಬಂದೆ.ಕೆಳಗಡೆ ಗೊರಲುತ್ತ, ನರಳುತ್ತ ಮಲಗಿರುವ ಮುದುಕಿಯೊಬ್ಬಳು ಕಾಣಿಸಿದಳು. ಆಕೆಯೂ " ದೈವಾಂಶ ಸಂಭೂತೆಯಂತೆ !" ಈಕೆ ವೀರಭದ್ರನ ಅತ್ತೆ. ಅಪ್ಪನ ಅಕ್ಕ ಪಾರ್ವತಿ ಎಂದು ಗೊತ್ತಾಯಿತು. ವಯಸ್ಸಿನಿಂದ ಹಣ್ಣಾದ ದೇಹ ನಿತ್ರಾಣವಾಗಿತ್ತು.ವೈದ್ಯಕೀಯ ಉಪಚಾರಗಳು ನಡೆದಿದ್ದವು.ಅಳಿಯನ ಪವಾಡ, ಪಾರ್ವತಿಯ ದೇವಾಂಶ ಸಂಭೂತತನ ಯಾವುದೂ ಈಕೆಯ ದೇಹದ ಮೇಲೆ ಕೆಲಸ ಮಾಡಿರಲಿಲ್ಲ.ಆದರೆ ಜನ ಮಾತ್ರ 'ಜನಮರುಳೋ ಜಾತ್ರೆ ಮರುಳೋ' ಎಂಬಂತೆ ವೀರಭದ್ರನ ಕಾಲಿಗೆ ಎರಗುತ್ತ , ಆಶೀರ್ವಾದ ಪಡೆಯುತ್ತ ಜನ ಅವನ ಸುತ್ತ ಮುತ್ತ ಮುಕುರಿದ್ದರು.

೦ ವರದಿಗಾರ

( ಕೃಪೆ : ಗೌರಿ ಲಂಕೇಶ್ ಬೆಂಗಳೂರು )

# ವೀರಭದ್ರನ ಜಾಬಾದಿತನವೂ ಮರುಳಾದ ರಾಜಕಾರಣಿಗಳೂ



ಅನ್ವರಿ

'ಅಂಕಲಗಿ ಮಠ 'ದ ವೀರಭದ್ರಯ್ಯ ಹೇಳಿ ಕೇಳಿ ಜಂಗಮ.ಜಾಬಾದಿತನವಂತೂ ಹುಟ್ಟಿನಿಂದಲೇ ಬಂದಿದೆ.ತನ್ನ ಚಾಲಾಕಿ ನಡೆಗಳಿಂದ, ಗಮ್ಯವಾದ ಮಾತುಗಾರಿಕೆ, ವಿಚಿತ್ರವಾದ ನಗೆಯ ನಟನೆಯ ಮೂಲಕ ಜನತೆಯನ್ನು ಅಕ್ಷರಶಃ ಬುದ್ದು ಮಾಡಿದ್ದಾನೆ. ಈತನ ಬುಟ್ಟಿಗೆ ಜಿಲ್ಲೆಯ ರಾಜಕಾರಣಿಗಳಾದ ಬಸವರಾಜ ಪಾಟೀಲ ಅನ್ವರಿ, ಅಮರೇಗೌಡ ಬಯ್ಯಾಪುರ,ಅಮರೇಶನಾಯಕ, ವೆಂಕಟೇಶನಾಯಕ, ಸಿಂಧನೂರಿನ ಬಾದರ್ಲಿ ಹಂಪನಗೌಡ, ಹುನಗುಂದದ ದೊಡ್ಡನಗೌಡ ಎಂ.ಎಲ್.ಎ. ಮೊದಲಾದವರು ಪಿಗ್ಗಿಬಿದ್ದಿದ್ದಾರೆ. ಕನಗಿರಿಯ ಶಾಸಕ ಮಾಜಿ ಮಂತ್ರಿ ಮಲ್ಲಿಕಾರ್ಜುನ ನಾಗಪ್ಪನಂತೂ ,ಮಂತ್ರಿಗಿರಿಯ ಪಟ್ಟ ದಕ್ಕುತ್ತಲೇ ಸ್ವಾಮಿಗೆ 'ಕಾಂಟೇಸ್ಸಾ ಕಾರ'ನ್ನೇ ಉಡುಗೊರೆಯಾಗಿ ನೀಡಿದ್ದಾನೆ. ಇನ್ನಿಬ್ಬ ಪುಣ್ಯಾತ್ಮ ಭಕ್ತರು ನೀಡಿದ 'ಸ್ಕಾರಪಿಯೋ' ಗಾಡಿಯಲ್ಲಿ ಕುಂತು ಹೊರಡುವ ವೀರಭದ್ರ , 'ಜಮ್' ಅಂತ ಸವಾರಿ ಹೊರಡುತ್ತಾನೆ. "ಯಾರದೋ ರೊಕ್ಕ ಎಲ್ಲಮ್ಮನ ಜಾತ್ರೆ "ಎಂದು ತಿಳಿದುಕೊಂಡ ಈ ಮೂರ್ಖಶಿಖಾಮಣಿ ಮನಬಂದಂತೆ ಖರ್ಚು ಮಾಡುತ್ತಾನೆ.

ಈ ವೀರಭದ್ರಯ್ಯನ 'ಬುಕಾಟಿ ' ಮಾತುಗಳಿಗೆ ಮರುಳಾಗಿ ಈಗಾಗಲೇ ಡಂಕನಕಲ್,ಗೋನಾಳ, ಅಂಬಾಮಠ,ಹುಲಿಗುಡ್ಡ(ಯಲಬುರ್ಗ)ಸಿದ್ದಾಪುರ, ಚಿಕ್ಕಮನ್ನಾಪುರ, ದಿನ್ನಿ ,ಕೈತನಾಳ (ಗೋಕಾಕ) ಚಿಕ್ಕೊಪ್ಪ ( ಬೆಳಗಾಂವ ಜಿಲ್ಲೆಯ ರಾಮದುರ್ಗ) ಮುಂತಾದ ೬೫ ಕಡೆಗೆ "ಬ್ಲೇಡ್ ಬ್ರ್ಯಾಂಚ್" ಗಳನ್ನು ತೆರೆದುಕೊಂಡು ಕುಂತಿದ್ದಾನೆ. ಕೇವಲ ಕೆಲವೇ ವರ್ಷಗಳಲ್ಲಿ ಇಂಥ 'ಬೋಂಗು ವ್ಯಾಪಾರಕ್ಕೆ' ೨೦೦ ಎಕರೆ ಬಿಟ್ಟಿ ಜಮೀನು, ಸ್ವಲ್ಪವೂ ತ್ರಾಸ ಇಲ್ಲದೆ ದಕ್ಕಿಹೋಗಿದೆ. ಆಯಾ ಊರುಗಳಲ್ಲಿಯ ಹೊಲಗಳ ದೇಕರೇಕಿಯನ್ನು ಆಯಾ ಗ್ರಾಮಸ್ಥರೆ ಮಾಡಿ ರಾಶಿಯನ್ನು ತಂದು ಮಠಕ್ಕೆ ಅರ್ಪಿಸಿ ಹೋಗುತ್ತಾರೆ.

ಅಂಕಲಗಿ ಮಠದ ಒಳಗೆಲ್ಲ ದಾಂಢಿಗರಂತಹ ಜನಗಳನ್ನು ಸಾಕಿಕೊಂಡು ಗುಂಡಾಗಿರಿಯನ್ನು ಹಿಂಬಾಗಿಲ ಮೂಲಕವಾಗಿ ನಡೆಸುವ ವೀರಭದ್ರಯ್ಯನ ಖಯಾಲಿಗಳು ಹಲವಾರು. ಮೈಮೇಲೆ ದೆವ್ವ ಬಂದಂತೆ ಜೀಪು, ಕಾರುಗಳನ್ನು ಓಡಿಸುವ ಪರಿ ನೆನೆದರೆ ಯಾರಿಗಾದರೂ ಬೆವರು ಬಸಿಯುತ್ತದೆ. ಧಾರ್ಮಿಕ ಸ್ವಾಮಿಯೊಬ್ಬನಲ್ಲಿರಬಹುದಾದ ಯಾವುದೇ ವಿದ್ವತ್ತು , ಸಚ್ಚಾರಿತ್ರ್ಯ , ಜ್ಞಾನ ಯಾವುದೂ ಇಲ್ಲದ ಹುಟ್ಟಾ ಮುಗ್ಗಲಾಸಗೇಡಿ,



ಬಯ್ಯಾಪುರ



# ಧೈರ್ಯವಂತನಿಗೆ ಜಗತ್ತು ಕಾದಿದೆ

ಕನ್ನಡ ನಾಡು ಕಂಡ ಅಪರೂಪದ ಪತ್ರಕರ್ತ ಬರಹಗಾರ ಹೋರಾಟಗಾರ ಡಾ.ಪಾಟೀಲ ಪುಟ್ಟಪ್ಪನವರ ಸಮಕಾಲೀನರು ನಾವೆಲ್ಲ ಎಂಬ ಹೆಮ್ಮೆ ನಮಗೆಲ್ಲ ಇರಲೇಬೇಕು. ಅವರ ಸರಳ ಭಾಷೆಯ ,ಸುಂದರ ಪದಬಂಧದ ಗದ್ಯ ಬರವಣಿಗೆ ಓದುತ್ತಿದ್ದರೆ ಎಂಥವನೂ ತನ್ನ ಬದುಕಿನ ದಾರಿಯನ್ನ ತಾನು ಕಂಡುಕೊಳ್ಳದೆ ಇರಲಾರ. ಈಗೋ ನಿಮಗಾಗಿ 'ಪಾಪು' ಅವರ ಚಿಕ್ಕ ಬರಹ. – ಸಂಪಾದಕ

ಅಸಾಧ್ಯ ಎಂಬುದು ಫ್ರೆಂಚ್ ಭಾಷೆಯ ಒಳ್ಳೆಯ ಪದ ಅಲ್ಲವೆಂದು ನೆಪೋಲಿಯನ್ ಹೇಳುತ್ತಿದ್ದನು. ಕಾರ್ಲಾಯಿಲನಿಗೆ ಅದು ಸುದೈವದ ಪದವೆನಿಸಿರಲೇ ಇಲ್ಲ. 'ಅಸಾಧ್ಯ' ಎನ್ನುವ ಪದವನ್ನು ಬಾಯಲ್ಲಿ ಇರಿಸಿಕೊಂಡಿರುವ ಜನರ ಕೈಯಿಂದ ಯಾವುದೊಂದು ಒಳ್ಳೆಯ ಕೆಲಸ ಆಗುವುದು ಸಾಧ್ಯವೇ ಇಲ್ಲ.

ಮಾಡಬೇಕಾದ ಒಳ್ಳೆಯ ಕಾರ್ಯಗಳೆಲ್ಲವೂ ಜಗತ್ತಿನಲ್ಲಿ ಮೊದ ಮೊದಲು ಅಸಾಧ್ಯವೆನಿಸಿದ್ದವು. ಮನಸ್ಸಿನಲ್ಲಿ ನಿರ್ಧಾರತೊಟ್ಟು,ತೋಳೇರಿಸಿ ನಿಂತವರೆದುರು ಅವೆಲ್ಲ ಅಸಾಧ್ಯಗಳೂ ಸೋತು ಹೋದವು. ಪರ್ವತವನ್ನು ಕಿತ್ತು ಇಡಬಲ್ಲೆ ಎನ್ನುವ ಧೈರ್ಯದ ಜನರು, ಅಸಾಧ್ಯ ಎನ್ನುವ ಮೂರ್ಖ ಶಬ್ದವನ್ನು ತಮ್ಮೆದುರು ಎತ್ತಲೇಬೇಡಿ ಎಂದು ಹೇಳುತ್ತಾರೆ.

ಬುದ್ಧಿವಂತರಿಗೆ ತಮ್ಮ ಸಾಮರ್ಥದ ಅರಿವು ಇರುತ್ತದೆ. ವಿವೇಕದಿಂದ ಅವರು ಅದನ್ನು ಹೆಚ್ಚು ಮಾಡಿಕೊಳ್ಳಬಲ್ಲರು. ತಮಗೇನು ಸಾಧ್ಯ ಎನ್ನುವುದು ಅವರಿಗೆ ಗೊತ್ತಿರುತ್ತದೆ. ಇನ್ನುಳಿದವರಿಗೆ ಅಸಾಧ್ಯವಾದುದನ್ನು ಸಾಧಿಸಲು ಮುಂದಾಗುತ್ತಾರೆ ಎಂತಲೇ ಅಸಾಧ್ಯಗಳನ್ನು ಸಾಧಿಸುವುದು ಅವರಿಗೆ ಸಾಧ್ಯವಾಗುತ್ತದೆ. ಆದರೆ ಮೂರ್ಖನಿಗೆ ತನ್ನ ಸಾಮರ್ಥ್ಯದ ಅರಿವು ಇರುವುದಿಲ್ಲ. ತನ್ನಿಂದ ಏನು ಸಾಧ್ಯ ಎನ್ನುವುದನ್ನು ತಿಳಿಯದೆ ಅವನು ಒಮ್ಮೆಲೇ ಅಸಾಧ್ಯಗಳಿಗೆ ಕೈ ಹಾಕುತ್ತಾನೆ. ಚೇಳಿನ ಮಂತ್ರ ಅರಿಯದಿದ್ದವನು ಹಾವಿನ ಹುತ್ತದಲ್ಲಿ ಕೈ ಹಾಕಿದ ಎಂಬಂತೆ ಅವನು ಮಾಡಿಕೊಳ್ಳುತ್ತಾನೆ.

ವಾಸ್ತವವಾದಿಯು , ಅಸಾಧ್ಯಗಳನ್ನು ಸಾಧಿಸುವ ಹೋರಾಟವು ವ್ಯರ್ಥವೆಂದು ಎಂದೂ ಹೇಳುವುದಿಲ್ಲ. ಅದಕ್ಕೋಸುಗ ಅವನು ಹೆಚ್ಚಿನ ಸಿದ್ಧತೆ ಮಾಡಿಕೊಂಡು, ಹೆಚ್ಚಿನ ಸಿದ್ಧತೆಗಳನ್ನು ತನ್ನಲ್ಲಿ ತಂದುಕೊಳ್ಳುತ್ತಾನೆ. ಸಣ್ಣ ಕೆರೆಯಲ್ಲಿ ಈಸಿದನು, ದೊಡ್ಡ ಕೆರೆಯಲ್ಲಿ ಈಸುವಂತೆ ತನ್ನ ಈಸುವ ಶೈಲಿಯನ್ನು ಬದಲಾಯಿಸಿಕೊಳ್ಳುತ್ತಾನೆ. ತಾನು ಹಿಡಿದ ಕಾರ್ಯವನ್ನು ಹೇಗೆ ಹಗುರ ಮಾಡಿಕೊಳ್ಳಬೇಕೆನ್ನುವುದು ಅವನಿಗೆ ಗೊತ್ತಿರುತ್ತದೆ.

ಕಲ್ಪನೆ ಹಾಗೂ ವಾಸ್ತವ ಬೇರೆ ಬೇರೆ. ಕಲ್ಪನೆಯು ವಾಸ್ತವವಲ್ಲ. ವಾಸ್ತವವು ಕಲ್ಪನೆಯಲ್ಲ. ಆದರೆ ನಿಜವಾದ ವಾಸ್ತವವಾದಿಯು ಕಲ್ಪನೆಯನ್ನು ವಾಸ್ತವಕ್ಕೆ ತರುವ ಪ್ರಯತ್ನಕ್ಕೆ ತೊಡಗಿರುತ್ತಾನೆ. ಆದರೆ ಬರಿಯ ಕಲ್ಪನೆಯಲ್ಲಿರುವ ಮನುಷ್ಯನು ಎಂದೂ ವಾಸ್ತವಕ್ಕೆ ಬಂದು ಹತ್ತುವುದೇ ಇಲ್ಲ.

ಯಾವ ಮನುಷ್ಯನು ಕಲ್ಪನೆಯನ್ನು ವಾಸ್ತವಕ್ಕೆ ತರ್ಜುಮೆ ಮಾಡುವನೋ ಅವನಿಗೆ ಜೀವನದಲ್ಲಿ ಅಸಾಧ್ಯಗಳೊಂದೂ ಕಂಡಿರುವುದಿಲ್ಲ. ನಾವು ಕಲ್ಪನೆಯನ್ನು ವಾಸ್ತವಕ್ಕೆ ತರುವ ಕತೃತ್ವಶಾಲಿಗಳಾಗಬೇಕು. ಅಂದರೇನೇ ಜಗತ್ತು ಒಂದು ಮಜಲಿನಿಂದ ಇನ್ನೊಂದು ಮಜಲಿಗೆ ಮೇಲೇರುತ್ತ ಹೋಗುತ್ತದೆ.

೦ ಡಾ. ಪಾಟೀಲ ಪುಟ್ಟಪ್ಪ



# ಗೂಗಲ್ ಬ್ರಿಜ್ ಕಮ್ ಬ್ಯಾರೇಜಿನಲ್ಲಿ ಕೋಟ್ಯಂತರ ಲೂಟಿ !

ಕೃಷ್ಣ ಭಾಗ್ಯ ಜಲ ನಿಗಮ ಉತ್ತರ ಕರ್ನಾಟಕದ ಭಾಗದಲ್ಲಿ ನಿರ್ಮಿಸುತ್ತಿರುವ ಈಗಾಗಲೇ ನಿರ್ಮಿಸಿರುವ ಕಾಮಗಾರಿಗಳನ್ನು ಹಾಗೂ ಅವುಗಳಲ್ಲಿ ಅದು ಮಾಡಿರುವ ಲಫಡಾಗಳನ್ನು ಪರಿಶೀಲಿಸುತ್ತ ಹೋದರೆ ಬಹುದೊಡ್ಡ ದೊಡ್ಡ ಕರ್ಮಕಾಂಡಗಳು ನಿಮ್ಮ ಕಣ್ಣೆದುರು ಬಿಚ್ಚಿಕೊಳ್ಳುತ್ತವೆ. ಈ ಕರ್ಮಕಾಂಡಗಳಲ್ಲಿ ಅಧಿಕಾರಿಗಳು ಹೇಗೋ ಹಾಗೆಯೆ ಇಲ್ಲಿನ ಜನ ಪ್ರತಿನಿಧಿಗಳೂ ಕಂಠಮಟ ಮುಣುಗಿಯೂ , ತಮಗೂ ಇದಕ್ಕೂ ಯಾವುದೆ ಸಂಬಂಧ ಇಲ್ಲದಂತೆ ಇದ್ದುಬಿಡುತ್ತಿದ್ದಾರೆ. ಇದರಿಂದಾಗಿ ದಿನೆ ದಿನೇ ಈ ಭಾಗದಲ್ಲಿ ಇಂಥ ಧರೋಡೆಖೋರರ ಸಂಖ್ಯೆ ಹೆಚ್ಚಾಗುತ್ತಲೆ ನಡೆದಿದೆ. ರಾಜ್ಯದ ಮುಖ್ಯಮಂತ್ರಿ ಮಾತ್ರವಲ್ಲದೆ ನೆರೆಯ ಆಂಧ್ರಪ್ರದೇಶದ ಮುಖ್ಯಮಂತ್ರಿ ರಾಜಶೇಖರರೆಡ್ಡಿಯವರೂ ಕೃ.ಭಾ.ಜಲ ನಿಗಮಗಳ ಕೆಲಸಗಳಲ್ಲಿ ಕೈಯಾಡಿಸುತ್ತಾರೆಂದರೆ ಇದರ ಮಹತ್ವ ಹಾಗೂ ಇವುಗಳಲ್ಲಿ ತಿನ್ನಬಹುದಾದ ಅಮೇಧ್ಯ ಯಾವ ಮಟ್ಟದ್ದು ? ಎಂದು ನೀವೆ ಊಹಿಸಿರಿ.

ಎಲ್ಲಿ ನೀರು ಹರಿಯುತ್ತದೋ ಅಲ್ಲಿ ಬಡತನ ಕಾಲು ಕಿತ್ತಿ ಓಡುತ್ತದೆ ಎಂಬ ಮಾತೇನೋ ಇದೆ. ಆದರೆ ಇಲ್ಲಿನ ರೈತರ ಬಡತನದ ಸ್ಥಿತಿಯಲ್ಲಿ ಮಾತ್ರ ಯಾವುದೇ ಏರುಪೇರಾಗಿಲ್ಲ. ಅಂದು ಸಾವಿರಗಟ್ಟಲೆ ಸಾಲದಲ್ಲಿದ್ದ ರೈತ ಇಂದು ಲಕ್ಷಗಳ ಸಾಲದಲ್ಲಿ ಇದ್ದಾನೆ. ಅಂದು ಸಾಲಗಾರರ ಕಾಟಕ್ಕೆ ಹೆದರಿ ರೈತ ಕುತ್ತಿಗೆಗೆ ಉರುಲು ಹಾಕಿಕೊಳ್ಳುತ್ತಿದ್ದರೆ , ಇಂದು ಕ್ರಿಮಿನಾಷಕ ಔಷಧಿ ಸೇವಿಸಿ ತನ್ನ ಬದುಕನ್ನು ಅಂತ್ಯಗೊಳಿಸಿಕೊಳ್ಳುತ್ತಿದ್ದಾನೆ. ಆಶ್ಚರ್ಯವೆಂದರೆ ಇಲ್ಲಿನ ಕಳ್ಳ ಕಂಟ್ರ್ಯಾಕ್ಟದಾರರು , ಖದೀಮ ಅಧಿಕಾರಿಗಳು ಹಾಗೂ ರಾಜಕಾರಣಿ ಎಂಬ ಮಧಾರಿಗಳು ಮಾತ್ರ ತಮ್ಮ ಹಣಕಾಸಿನ ಟ್ರಜರಿಯ ತುಂಬ ಕೆ.ಬಿ.ಜೆ.ಎನ್.ನ ಹೆಸರಿನಲ್ಲಿ ಕೋಟ್ಯಂತರ ಲೂಟಿಯ ಜಾತ್ರೆ ನಡೆಸಿದ್ದಾರೆ. ಮಾಡದ ಕಾಮಗಾರಿಗಳನ್ನು ಮಾಡಿದ್ದೇವೆಂದು, ಕಾಮಗಾರಿಗಳ ರಿಪೇರಿಗೆಂದು , ಯಾವ್ಯಾವೋ ಸಬೂಬು ಹೇಳಿ ಮತ್ತೊಂದು ವರದಿ ತಯಾರಿಸಿ , ಬಿಲ್ ಗಳನ್ನು ಬಾಣದ ರೀತಿಯಲ್ಲಿ ಮಾಡಿ ಮುಂಡಾಮೋಚುವ ಕೆಲಸ ಯಾವ ಎಗ್ಗಿಲ್ಲದೆ ಇಲ್ಲಿ ದಿನ ನಿತ್ಯ

# ನಂಗಾನಾಚ



ಆಡಳಿತಾಧಿಕಾರಿ ದೇವರಾಜ

ನಡೆಯುತ್ತಲೆ ಇರುತ್ತವೆ. ಈ ಕೆ.ಬಿ.ಜೆ.ಎನ್.ಎಲ್.ನಲ್ಲಿ ಈಗಾಗಲೇ ಎಂಥೆಂಥ ಮೀನುಗಳು ,ಮೊಸಳೆಗಳು, ನೀರಿನ ತಿಮ್ಮಿಂಗಲುಗಳು ಇವೆ ಎಂಬುದು ನಿಮಗೆ ಊಹಿಸುವುದುಕ್ಕೂ ಕಷ್ಟವಾಗುತ್ತವೆ.

ರಾಯಚೂರು ಜಿಲ್ಲೆಯ ದೇವದುರ್ಗ ಸಮೀಪವ ಗೂಗಲ್ ನಲ್ಲಿ ನಿರ್ಮಿಸಿಲಾಗಿರುವ ಬ್ರಿಜ್ ಕಮ್ ಬ್ಯಾರೇಜ್‌ನ್ನು ರಾಯಚೂರು - ಯಾದಗಿರಿ - ಶಹಾಪುರ ಹಾಗೂ ದೇವದುರ್ಗದ ಊರುಗಳಿಗೆ ಸಂಪರ್ಕ ಕಲ್ಪಿಸಲು ರೂಪಿಸಲಾದ ಬ್ರಿಜ್. ಜೊತೆಗೆ ಇಲ್ಲಿನ ಥರ್ಮಲ್ ಘಟಕದ ವಿದ್ಯುತ್ ಉತ್ಪಾದನೆಗೂ ಇದರಿಂದ ಅನುಕೂಲವಾಗುತ್ತದೆ. ಅಲ್ಲದೆ ಸುತ್ತ ಮುತ್ತಲಿನ ಊರುಗಳಲ್ಲಿರುವ ಬೋರವೆಲ್ ಗಳ ನೀರಿನ ಒರತೆಯನ್ನು ನೀಗಿಸಲು , ಅವುಗಳಲ್ಲಿ ಈಗಾಗಲೆ ಇರುವ ಕ್ಲೋರೈಡ್ ಅಂಶಗಳನ್ನು ಕಡಿಮೆ ಮಾಡುವ ,ಏತ ನೀರಾವರಿಗೆ ಉಪಯೋಗವಾಗಲೆಂದು ಈ ಬ್ಯಾರೇಜ್‌ನ್ನು ನಿರ್ಮಿಸಲಾಗಿದೆ. ಮೊದಲು ಇದನ್ನು ಆಂದ್ರ ಮೂಲದ ಎ.ಪ್ರಭಾಕರರೆಡ್ಡಿ ಎಂಬ ಖದೀಮ ಕಂಟ್ರ್ಯಾಕ್ಟರ್ ೧೫-೧೧-೨೦೦೨ ರಂದು ಬ್ರಿಜ್ಜ್ ಕಮ್ ಬ್ಯಾರೇಜಿನ ಕಾಮಗಾರಿ ಶುರುಮಾಡಿದ. ಇವರ ಎಸ್ಟೀಮೆಟ್ ಕಾಸ್ಟ : ೩೬ಕೋಟಿ ೭೦ ಲಕ್ಷ, ಟೆಂಡರ್ ಗೆ ಇಟ್ಟ ಮೊತ್ತ : ೩೫ಕೋಟಿ ೬೦ ಲಕ್ಷ . ಕಾಮಗಾರಿಗೆ ತಗುಲಬಹುದಾದ ವೆಚ್ಚ : ೪೦ ಕೋಟಿ ೪೧ ಲಕ್ಷ. ಕಾಮಗಾರಿ ಪಡೆದದ್ದು : ೨೧ಕೋಟಿ ೨೧ ಲಕ್ಷ . ಈ ಕೆಲಸವನ್ನು ಕೇವಲ ಒಂದು ವರ್ಷದೊಳಗೆ ಪೂರೈಸಬೇಕು ಎಂದಿತ್ತು. ಇದರಲ್ಲಿ ಸಿವಿಲ್ ಕಾಮಗಾರಿಯ ಬ್ರಿಜ್ ಕಮ್ ಬ್ಯಾರೇಜ್ ಸೇರಿದಂತೆ ೨.೦೦ X ೪.೫೦ ಮೀಟರ್ ಸೈಜಿನ ನೀಡಲ್ ಟೈಪ್ ಗೇಟುಗಳೂ ಸೇರಿದ್ದವು. ಮೂಲ ಕರಾರಿನಲ್ಲಿ ಗೇಟುಗಳ ವೆಚ್ಚ ೨೬.೬೦ ಕೋಟಿ ಇತ್ತು.

ಆದರೆ ಕಂತ್ರಾಟುದಾರರಿಗೆ , ರಾಜಕಾರಣಿಗಳಿಗೆ ಹಾಗೂ ತಮ್ಮ ಜೇಬಿಗೆ ಹಣ ಇಳಿಸಿಕೊಳ್ಳಬೇಕೆಂದಿದ್ದ ಕೆ.ಬಿ.ಜೆ.ಎನ್.ಎಲ್. ಅಧಿಕಾರಿಗಳು ಶೇಕಡಾ ೭೦ ರಷ್ಟು ಕಾಮಗಾರಿ ಮುಗಿದಾಗ ಒಮ್ಮಿದೊಮ್ಮೆ ಜ್ಞಾನೋದಯವಾದವರಂತೆ ಈ ಬ್ರಿಜ್ ಕಮ್ ಬ್ಯಾರೇಜಿನ ಎಡದಂಡೆಯಲ್ಲಿ ೧೦ ಮೆಗಾವ್ಯಾಟ್ ಸಾಮರ್ಥ್ಯದ ಪವರ್ ಪ್ಲಾಂಟ್‌ನ್ನು ಆಂದ್ರ ಮೂಲದ ಎಸ್.ಆರ್.ಎಸ್. ಎನರ್ಜಿ ಸಿಸ್ಟಮ್ಸ್ ( ಆಂದ್ರದ ಮುಖ್ಯ ಮಂತ್ರಿ ರಾಜಶೇಖರ ರೆಡ್ಡಿಯವರ ಮಗನಿಗೆ ಸಂಬಂಧಿಸಿದ್ದು ) ಕಂಪನಿಗೆ ವಹಿಸಿಕೊಟ್ಟಿತು. ಜೊತೆಗೆ ೧೨೦ ಗೇಟುಗಳ ಬದಲಾಗಿ ಮಳೆಗಾಲದಲ್ಲಿ ಲಿಫ್ಟಿಂಗ್ ಅರೆಂಜಮೆಂಟ್ ಮ್ಯಾನುವೆಲ್ ಇದ್ದುದ್ದರಿಂದ ಮಳೆಗಾಲದ ಸಮಯದಲ್ಲಿ ಗೇಟುಗಳ ಆಪರೇಷನ್‌ಗೆ ತೊಂದರೆಯಾಗುತ್ತದೆಂದು ವರದಿ ತಯಾರಿಸಿ, ಗೇಟ್ ಸೈಜನ್ನು ೨.೦೦ X ೪.೫೦ ಮೀಟರನಿಂದ ೭.೬೦X ೪.೫೦ ಮೀಟರ್ ಗೆ ಬದಲಾಯಿಸಿದರು. ಜೊತೆಗೆ ೨೧೦ ಗೇಟುಗಳ ಬದಲಾಗಿ ೭೦ ಗೇಟುಗಳಿಗೆ ಅವುಗಳ ಸಂಖ್ಯೆಯನ್ನು ಇಳಿಸಿದರು. ಹೊಸ ಗೇಟುಗಳಿಗೆ ೨೬.೬೦ ಕೋಟಿ ಮಾಡಿ , ಮತ್ತೆ ಹೊಸ ಟೆಂಡರ್‌ನ್ನು ೧೫-೬-೨೦೦೭ ರಂದು ಕರೆಯಲಾಯಿತು. ಇದಕ್ಕೆ ಒಟ್ಟು ೭ ಜನ ಗುತ್ತಿಗೆದಾರರು ಅರ್ಜಿಯನ್ನು ಸಲ್ಲಿಸಿದ್ದರು. ಇದರಲ್ಲಿ ಐದು ಜನ ಗುತ್ತಿಗೆದಾರರನ್ನು ಉದ್ದೇಶ ಪೂರ್ವಕವಾಗಿ ಪ್ರೀ ಕ್ವಾಲಿಫಿಕೇಷನ್ ಹಂತದಲ್ಲಿ ಅಧಿಕಾರಿಗಳು ಮತ್ತು ಗುತ್ತೇದಾರರು ಶಾಮೀಲಾಗಿ ( ಕಾನೂನು ಬಾಹಿರವಾಗಿ ರಿಂಗ್ ಅಮೌಂಟ್ ಸ್ವೀಕರಿಸಿ ) ತಿರಸ್ಕರಿಸಿದ್ದಾರೆ. ಇದರಿಂದ ಇಬ್ಬರು ಗುತ್ತೇದಾರರು ಮಾತ್ರ ಟೆಕ್ನಿಕಲ್ ಬಿಡ್ಡಗೆ ಅರ್ಹರೆಂದು ಪರಿಗಣಿಸಿರುತ್ತಾರೆ. ಜಿ.ಶಂಕರ ಗುತ್ತಿಗೆದಾರರು ಬಿಜಾಪುರ ಶೇ.೯೧.೮೮ ಕೋಟಿ ನಮೂದಿಸಿದರೆ

# ನಂಗಾನಾಚ

ಮೆ.ರಘು ಕನ್ಸಷ್ಟ್ರಕ್ಷನ್ಸ್ ಬೆಂಗಳೂರು ಶೇಕಡಾ ೧೦೪ . ೧೭ ಕ್ಕೆ ಹೆಚ್ಚಿನ ದರವನ್ನು ನಮೂದಿಸಿದರು. ಕೊನೆಗೆ ಕಡಿಮೆ ಮೊತ್ತ ನಮೂದಿಸಿದ (೪೯ ಕೋಟಿ ೫೦ ಲಕ್ಷ ) ಜಿ.ಶಂಕರ ಎಂಬುವವರಿಗೆ ಕಾಮಗಾರಿಯ ಗುತ್ತೆ ಸಿಕ್ಕಿದೆ. ಈ ಕುರಿತು ವಿಭಾಗ ಕಛೇರಿ ಹೊನ್ನಕುಣಿಯಲ್ಲಿ ಅಕ್ಟೋಬರ್ ೨೦೦೭ ರಂದು ಕಾಮಗಾರಿಯ ಒಪ್ಪಂದ ಕೂಡ ನಡೆದು ಹೋಗಿತು.

ತಮಾಷೆ ಎಂಥದ್ದೆಂದರೆ ಹೀಗೆ ಒಪ್ಪಂದ ಮಾಡಿಕೊಂಡ ತಿಂಗಳೊಳಗೆ ಅಂದರೆ ೧೪ ನವೆಂಬರ್ ೨೦೦೭ ರಂದು ಹೊಸಪೇಟೆಯ ಮಲ್ಲಿಗೆ ಲಾಡ್ಜನಲ್ಲಿ ತಂಗಿ ೫.೬೦ ಕೋಟಿ ಬಿಲ್ಲನ್ನು ತಯಾರಿಸಿ ಉಪವಿಭಾಗ ಎಸ್.ಬಿ.ಆರ್.ಸಂ.೪೭ ಕ್ಕೆ ಸಲ್ಲಿಸಿದ್ದಾರೆ. ದಿ.೨೦ ಡಿಸೆಂಬರ್ ೨೦೦೭ ಕ್ಕೆ ಶಿವಣ್ಣ ಸಹಾಯಕ ಅಭಿಯಂತರ ನಾ.ಎ.ದಂ.ಕಾ.ಉಪ ವಿಭಾಗ ಸಂಖ್ಯೆ : ೧೩ , ತಿರುಮಲ್ ರಾವ್ ಕುಲ್ಕರ್ಣಿ ಸ.ಅಭಿಯಂತರ ನಾರಾಯಣಪುರ ಬಲದಂಡೆ ಕಾಲುವೆ ಉಪವಿಭಾಗ ಸಂಖ್ಯೆ : ೧೧ , ಜಿ.ಎಸ್. ಹನುಮಂತರಾಜ ಸಹಾಯಕ ಕಾರ್ಯಪಾಲಕ ಅಭಿಯಂತರು, ನಾ.ಬ.ದಂ.ಕಾ. ಉಪವಿಭಾಗ ಸಂಖ್ಯೆ : ೨೨ ಹಾಗೂ ಜಿ.ಹನುಮಂತರಾಯಪ್ಪ ಕ.ಪಾ.ಅ.ನಾ.ಬ.ದಂ.ಕಾ.ವಿಭಾಗ ಸಂಖ್ಯೆ : ೪ ಚಿಕ್ಕಹೊನ್ನಕುಣಿ ಇವರು ಮತ್ತೊಂದು ಬಿಲ್ ರೆಡಿ ಮಾಡಲು ಹೈದ್ರಾಬಾದ್ ಗೆ ಹೋಗುತ್ತಾರೆ. ಅಲ್ಲಿಯೂ ಖಾಸಗಿ ಲಾಡ್ಜವೊಂದರಲ್ಲಿ ತಂಗಿ ಎಲ್ಲಾ ಡೀಲ್ ಮುಗಿಸಿಕೊಂಡು ಮತ್ತೆ ಎಸ್.ಬಿ. ಆರ್.ಸಂಖ್ಯೆ : ೪೯ ರ ಮೂಲಕ ಸಲ್ಲಿಸಿದ್ದಾರೆ. ಇದರಿಂದ ಒಟ್ಟು ೧೫ ಕೋಟಿ ೯೧ ಲಕ್ಷ ರೂಪಾಯಿಗಳನ್ನು ಹೊಸಪೇಟೆ ಮತ್ತು ಹೈದ್ರಾಬಾದ್ ಲಾಡ್ಜಗಳಲ್ಲಿ ತಂಗುವ ಮೂಲಕ ಗುತ್ತೇದಾರನಿಗೆ ಕೊಟ್ಟಿದ್ದಾರೆ. ಗೇಟುಗಳ ಕಾಮಗಾರಿಯನ್ನು ಆಯಾ ಸ್ಥಳಕ್ಕೆ ಹೋಗಿ ಪರಿಶೀಲಿಸಿ ನೋಡಿ, ವರದಿ ಪಡೆದು ಬಿಲ್ ಪಾವತಿಸಬೇಕಾದ ಖದೀಮ ಅಧಿಕಾರಿಗಳು ತಮ್ಮ ಮನಬಂದಂತೆ ನಡಕೊಂಡಿದ್ದಾರೆ.

ಆಶ್ಚರ್ಯವೆಂಥದೆಂದರೆ ಗೂಗಲ್ ಬ್ಯಾರೇಜಿನ ಹತ್ತಿರ ಗೇಟ್ ಗಳನ್ನು ನೋಡಲೆಂದು ಖುದ್ದು ನಾನು ಹೋಗಿದ್ದಾಗ ಅಲ್ಲಿ ಪಾವತಿಸಿದ ಬಿಲ್ಲಿನ ಶೇಕಡಾ ೧೦ ರಷ್ಟು ಸಹ ಗೇಟುಗಳ ಭಾಗಗಳು ಇರಲಿಲ್ಲ. ಕೇವಲ ೬ ಕೋಟಿ ೨೦ ಲಕ್ಷಕ್ಕೆ ಮುಗಿಯಬೇಕಾಗಿದ್ದ ಕಾಮಗಾರಿಯನ್ನು ೪೯ ಕೋಟಿ ೫೦ ಲಕ್ಷಕ್ಕೆ ಏರಿಕೆ ಮಾಡಿರುವುದು ಏನನ್ನು ತೋರಿಸುತ್ತದೆ. ಕಂಟ್ರ್ಯಾಕ್ಟರರಿಗೆ ಸಹಕರಿಸುವ ಭ್ರಷ್ಟ ಅಧಿಕಾರಿಗಳು, ಅವರಿಗೆ ಆಗಾಗ ಹೆದರಿಸಿ ತಾವು ಅಮೇಧ್ಯ ತಿನ್ನುವ ರಾಜಕಾರಣಿಗಳು, ಯೋಜನೆ ರೂಪಿಸುವ ಮೊದಲೆ ಪರ್ಸೇಂಟೆಜ್ ಹೊಡಕೊಂಡು ಕುಳಿತುಕೊಳ್ಳುವ ಸಿ.ಎಂ.ಗಳು ,ಮಂತ್ರಿಗಳು ಇರುವಾಗ ಈ ಕಾಮಗಾರಿಗಳ ಅವ್ಯವಹಾರ ಅವ್ಯಾಹತವಾಗಿ ನಡೆಯುತ್ತಲೆ ಇರುತ್ತವೆ.

ರಾಜಕಾರಣಿಗಳು ನಿಸ್ತಂತುವಾಗಿರುವ ಈ ದಿನಗಳಲ್ಲಾದರೂ ರಾಜ್ಯ ಪಾಲರು ಕೆ.ಬಿ.ಜೆ.ಎನ್.ಎಲ್ ನ ಎಂ.ಡಿ. ಮಹೇಶ್, ಆಡಳಿತಾಧಿಕಾರಿ ದೇವರಾಜ , ಜಿ.ಹನುಮಂತಪ್ಪ ,ಚಂದ್ರಶೇಖರ ನಾಯರ ಮುಂತಾದ ಖದೀಮರ ವಿರುದ್ಧ ಕಠಿಣ ಕ್ರಮ ಕೈಗೊಳ್ಳಬೇಕು. ಕಾಮಗಾರಿಯೇ ಮಾಡದೆ ಬಿಲ್ ಎತ್ತಿಕೊಂಡು ಹೋದ ಎ.ಪ್ರಭಾಕರರೆಡ್ಡಿ ಎಂಬ ಕಂಟ್ರ್ಯಾಕ್ಟರನಿಗೂ ಹಾಗೂ ಆತನಿಗೆ ಸಹಕರಿಸಿದ ಈ ಎಲ್ಲ ಅಧಿಕಾರಿಗಳ ವಿರುದ್ಧ ರಾಜ್ಯಪಾಲರೆ ಸೂಕ್ತ ಕ್ರಮ ಕೈಗೊಳ್ಳಬೇಕು. ಇಲ್ಲದೆ ಹೋದರೆ ಈ ಭಾಗದ ರೈತರೆ ಇವರ ಪ್ಯಾಂಟುಗಳನ್ನು ಕಳಚಿ ಸಾರ್ವಜನಿಕವಾಗಿ ನಿಲ್ಲಿಸಬಹುದಾದ ದಿನಗಳು ಬಹಳ ದೂರ ಇಲ್ಲವೆನಿಸುತ್ತವೆ . **೦ ವಿಶ್ವಾರಾಧ್ಯ ಸತ್ಯಂಪೇಟೆ**

(ಈ ವರದಿಗೆ ಸಂಬಂಧಿಸಿದ ಎರಡು ಟಿಪ್ಪಣಿಗಳು ಮುಂದಿನ ಪುಟಗಳಲ್ಲಿ ಇವೆ – ಸಂ )

## ಕೆ.ಬಿ.ಜೆ.ಎನ್.ಎಲ್ ಕರ್ಮಕಾಂಡ

# ನಾಮರ್ಧ ರಾಜಕಾರಣಿಗಳು

ದೇವದುರ್ಗ ತಾಲೂಕಿನ "ಮಾಜಿ ಶಾಸಕ ಹನುಮಂತಪ್ಪ ಆಲ್ಕೋಡ ಭ್ರಷ್ಟ ರಾಜಕಾರಣಿ" ಎಂದು ಆರೋಪ ಮಾಡುತ್ತ ತಾನು ಮಾತ್ರ ಸಾಚಾ ಎಂದೇ ಬೀಗಿಕೊಂಡಿದ್ದ ಮಾಜಿ ಎಂ.ಎಲ್.ಸಿ. ಬಸವರೆಡ್ಡಿ ಇಟಗಿ ಇಲ್ಲಿನ ಕೆ.ಬಿ.ಜೆ.ಎನ್.ಎಲ್. ಕಚೇರಿ ಹಾಗೂ ಆ ಮೂಲಕ ನಡೆಯಬಹುದಾವ ಫಿಲ್ಲಾ ಕಾಮಗಾರಿಗಳಲ್ಲಿ ಮೂಗು ತೂರಿಸದೆ ಬಿಡಲಾರ. ಏಕೆಂದರೆ ಅವೆಲ್ಲ ತನ್ನ ಏರಿಯಾದಲ್ಲಿ ನಡೆಯುತ್ತಿವೆ. ತಾನೆ ? ಅಲ್ಲದೆ ಕುಮಾರಸ್ವಾಮಿ ಸರಕಾರದಲ್ಲಿ ಸಚಿವನಾಗಿದ್ದ ದರ್ಶನಾಪುರ ಶರಣಬಸಪ್ಪ ಈತನ ಸಂಬಂಧಿ ಬೇರೆ. ಪವರ್ ನಲ್ಲಿರುವ ಸಚಿವರೊಬ್ಬರ ಬೆಂಬಲ ಜೊತೆಗೆ ಅವರ ಪಾಲು ಇರುವುದರಿಂದ ಈತನಿಗೆ ಇಲ್ಲಿ ಕೇಳುವವರ್‍ಯಾರು ಇಲ್ಲ ಎಂಬ ಸ್ಥಿತಿ ನಿರ್ಮಿಸಿಕೊಂಡಿದ್ದಾನೆ.

ಎ.ಪ್ರಭಾಕರರೆಡ್ಡಿ ಎಂಬ ಖದೀಮ ಕಂಟ್ರ್ಯಾಕ್ಟರನಿಗೆ ಹೆದರಿಸಿ 'ಗೂಗಲ್' ಕಾಮಗಾರಿಗೆ ತಂದಿದ್ದ ಬಹುತೇಕ ಮಟೆರಿಯಲ್‌ನ್ನು ಕೊಪ್ಪರದಿಂದ ಹೇರೂರು ವರೆಗಿನ ಎರಡು ಬ್ರಿಡ್ಜಗಳ ಕೆಲಸಕ್ಕೆ ಬಳಸಿಕೊಂಡದ್ದು ಎಲ್ಲರೂ ಗಮನಿಸಿದ್ದಾಗಿದೆ.

ಅಲ್ಲದೆ ಈ ಕಾಮಗಾರಿಗಳು ೫೦ ಲಕ್ಷಕ್ಕೆ ಆಗುವಂಥವು. ಆದರೆ ಬಸವರೆಡ್ಡಿ ತನ್ನ ಗುಡಾಣ ತುಂಬಿಕೊಳ್ಳಲು ತಲಾ ೨ ಕೋಟಿಗೆ ಒಂದೊಂದು ಬ್ರಿಡ್ಜ್ ಮಾಡಿ ವಿಕ್ರಮಸಾಧಿಸಿದ್ದಾನೆ. ಇದೆಲ್ಲ ಎಲ್ಲರಿಗೂ ಗೊತ್ತಿರುವ ಬಹಿರಂಗ ಸತ್ಯವಾಗಿದೆ. ಆದರೆ ಈ ಬಗ್ಗೆ ಇಲ್ಲಿನ ಎಂ.ಪಿ. ವೆಂಕಟೇಶ್ ನಾಯಕ ಮಾತ್ರ ತುಟಿ ಪಿಟಿಕ್ ಅನ್ನದೆ ತೆಪ್ಪಗೆ ಕುಳಿತುಕೊಂಡಿದ್ದಾರೆ. ಇದಕ್ಕೆಲ್ಲ ಮುಖ್ಯ ಕಾರಣವೆಂದರೆ ನೀನು ಮಾಡಿದ್ದು ನಾನು ಕೇಳುವುದಿಲ್ಲ. ನಾನು ಮಾಡಿದ್ದು ನೀ ಕೇಳಬಾರದು ಎಂಬ ಅಲಿಖಿತ ಒಪ್ಪಂದವೆ ಆಗಿದೆ ಎಂಬುದು ಸ್ಪಷ್ಟ.

ಇಂಥ ನಾಮರ್ಧ ರಾಜಕಾರಣಿಗಳು ವಾಸವಾಗಿರುವ ದೇವದುರ್ಗ ತಾಲೂಕನ್ನು ಯಾರಾದರೂ ಕಾಪಾಡಲು ಸಾಧ್ಯವೆ ?

# ಸರಕಾರಕ್ಕೆ ಪಂಗನಾಮ ಹಾಕಿದ ಕೆ.ಬಿ.ಜೆ.ಎನ್.ಎಲ್ ಖದೀಮರು



ವಿದ್ಯುತ್ ಘಟಕ

ಎ.ಪ್ರಭಾಕರರೆಡ್ಡಿ ಎಂಬ ಆಂದ್ರದ ಖದೀಮ ಕಂಟ್ರ್ಯಾಕ್ಟರನಿಗೆ ಲಾಭಮಾಡಿಕೊಡುವುದು. ಅಂದರೆ ಕಾಮಗಾರಿ ಪೂರ್ಣಗೊಳ್ಳುವ ಮೊದಲೆ ,(ಗೇಟುಗಳನ್ನು ತಯಾರಿಸಿ ಕೂಡಿಸದೆ ಇದ್ದರೂ ) ಅವನಿಗೆ ಇಲ್ಲಿಂದ ಗೇಟ್ ಪಾಸ್ ನೀಡಿದರು. ಈ ಖದೀಮ ಕಂಟ್ರ್ಯಾಕ್ಟರ ತಾನು ಈ ಕಾಮಗಾರಿಗೆ ತೆಗೆದುಕೊಂಡ ಕಾಲಾವಧಿ ತಾನು ಒಪ್ಪಿಕೊಂಡ ಕಾಲಾವಧಿಗಿಂತಲೂ ಮೂರ್‍ನಾಲ್ಕು ಪಟ್ಟು ಹೆಚ್ಚಾಗಿತ್ತು. ಇದನ್ನು ಸರಿದೂಗಿಸಲು ಮತ್ತೆ ರೇಟ್ ರೀವೈಜ್ ಮಾಡುವ ನೆವದಲ್ಲಿ ( ೨೧೦ ಗೇಟುಗಳು ಕೂಡಿಸದೇ ಇದ್ದರೂ ) ಹೆಚ್ಚು ಬಿಲ್ ಪಾವತಿಸಲಾಯಿತು. ಕಾನೂನಾತ್ಮಕವಾಗಿ ತಾವು ಒಪ್ಪಿಕೊಂಡ ಕಾಲಾವಧಿಯು ಒಳಗೆ ಕಾಮಗಾರಿಯುನ್ನು ಮುಗಿಸಿಕೊಡದೆ ಕಂಟ್ರ್ಯಾಕ್ಟುದಾರರನ್ನು ಇಲಾಖೆ ಬ್ಲಾಕ್ ಲಿಸ್ಟನಲ್ಲಿ ಇಡಬೇಕು. ಜೊತೆಗೆ ಅಂತಹವರ ಗೋಳುಗಳನ್ನು ಕೇಳುತ್ತ ಪರಿಷ್ಕೃತ ದರ ನೀಡಬಾರದು ಎಂದು ಇದ್ದರೂ ಅದನ್ನು ಯಾವ ಗಣನೆಗೆ ತಕ್ಕೊಳ್ಳಲಿಲ್ಲ.



ಜಿ.ಹನುಮಂತರಾಯಪ್ಪ

ಜೊತೆಗೆ ಆಂದ್ರ ಪ್ರದೇಶ ಮುಖ್ಯಮಂತ್ರಿಯ ಸಂಬಂಧಿಗಳ ಹೆಸರಿನಲ್ಲಿರುವ 'ಎಸ್.ಆರ್.ಎಸ್. ಎನರ್ಜಿ ಸಿಸ್ಟಮ್' ಎಂಬ ಕಂಪನಿ ಇಲ್ಲಿ ನೆಲೆ ಕಂಡುಕೊಳ್ಳಲು ಆದ್ಯತೆ ಕೊಡುವುದೇ ಆಗಿದೆ. ಗೇಟುಗಳ ಬದಲಾವಣೆಯ ಸಂದರ್ಭದಲ್ಲಿ ತಾಂತ್ರಿಕ ಸಲಹಾ ಸಮಿತಿಯು ಕಾಮಗಾರಿಯ ವ್ಯತ್ಯಾಸ ಮೊತ್ತವನ್ನು ಮೊದ ಮೊದಲು ಎಸ್.ಆರ್.ಎಸ್. ಎನರ್ಜಿ ಕಂಪನಿಯೇ ಸಂದಾಯ ಮಾಡಬೇಕು ಎಂದೇ ಚರ್ಚೆ ನಡೆದಿತ್ತು. ಆದರೆ ಖದೀಮ ರಾಜಕಾರಣಿಗಳು ಹಾಗೂ ಜಿ.ಹನುಮಂತರಾಯುಪ್ಪ ಎಂಬ ಕಾರ್ಯಪಾಲಕ ಅಭಿಯಂತರ ಚಿಕ್ಕಹೊನ್ನಕುಣಿ ಹಾಗೂ ಚಂದ್ರಶೇಖರ ನಾಯರ ಚಿಕ್ಕಹೊನ್ನಕುಣಿ ಎಂಬ ಕೇರಳ ಮೂಲದ ತಲೆ ಹಿಡುಕ ಅಧಿಕಾರಿಗಳು ಗೋಲ್ ಮಾಲ್ ಮಾಡಿ ಸರಕಾರದ ಬೊಕ್ಕಸಕ್ಕೆ ಟೋಪಿ ಹಾಕಿದ್ದಾರೆ. ಇದರಲ್ಲಿ ಕೆ.ಬಿ.ಜೆ.ಎನ್.ಎಲ್. ಎಂ.ಡಿ. ಮಹೇಶ್ ಹಾಗೂ ಕೆ.ಬಿ.ಜೆ.ಎನ್.ಎಲ್.ನ ಆಡಳಿತಾಧಿಕಾರಿಯಾಗಿರುವ ದೇವರಾಜಗೂ ಅಮೇಧ್ಯ ತಲುಪಿದೆ. ಹೀಗೆ ಎಲ್ಲಾ ಅಧಿಕಾರಿ ರಾಜಕಾರಣಿಗಳು ತಿಂದುಂಡು ಡೇಕರಿಕೆ ಹೊಡೆದ ಮೇಲೆ ಇನ್ನೇನಿದೆ ? ಇಡೀ ಸರಕಾರವನ್ನಾದರೂ ಕಂಟ್ರ್ಯಾಕ್ಟರರಿಗೆ ಗುತ್ತಿಗೆಯಾಗಿ ನೀಡುತ್ತಾರೆ.



ಚಂದ್ರಶೇಖರ ನಾಯರ



ಖದೀಮ ಕಂಟ್ರ್ಯಾಕ್ಟರ ಎ.ಪ್ರಭಾಕರರೆಡ್ಡಿ

# ಇದು ಬದುಕಿಗೆ ಬೇಕಾದ ಮಾತು



ಒಂದೊಂದು ಸಲ ಎಂಥವರ ಬದುಕು ಡೋಲಾಯಮಾನವಾಗಿರುತ್ತದೆ. ಬದುಕೆ ಸಾಕಪ್ಪ ಎಂದು ನಿಟ್ಟುಸಿರು ಬಿಡುತ್ತೇವೆ. ಮನೆ – ಮಠ– ಊರು– ಕೇರಿ ಗೆಳೆಯ ಸಂಬಂಧಿಗಳು ಕೊನೆಗೆ ಹೆಂಡತಿ – ಮಕ್ಕಳೂ ಬೇಡವೇ ಬೇಡ ಎಂದು ಬಿಡುತ್ತೇವೆ. ಯಾರೂ ಗುರುತು ಪರಿಚಯವೆ ಇರದ ಊರಿನಲ್ಲಿ ಹೋಗಿ ಹೇಗೋ ಬದುಕಿದರಾಯಿತು ಎಂಬ ವಾಂಛಲ್ಯಕ್ಕೆ ಕಟ್ಟು ಬಿದ್ದು ಒಂದು ದಿನ ಯಾರಿಗೂ ಹೇಳದೆ ಕೇಳದೆ ಎದ್ದು ಹೋಗುತ್ತೇವೆ.

ಆದರೆ ಇದು ಸರಿಯಾದ ನಿರ್ಧಾರವೆ ? ಎಂದು ಕ್ಷಣ ಯೋಚಿಸುವುದಿಲ್ಲ. ಬದಲಾಗಿ ಅದಕ್ಕೆ ತಕ್ಕಂತಹ ಪೂರಕ ಅಂಶಗಳನ್ನು ಮಾತ್ರ ಲೆಕ್ಕ ಹಾಕಿ ಗುಣಿಸಿ –ಭಾಗಾಕಾರ ಮಾಡಿ ನಾವು ಆ ಘಳಿಗೆಯಲ್ಲಿ ತೆಗೆದುಕೊಂಡ ನಿರ್ಧಾರವೆ ಸರಿ ಅನಿಸಿಬಿಡುತ್ತದೆ.

ಇದಕ್ಕೆ ಮುಖ್ಯ ಕಾರಣ ನಾವು ಅದುವರೆಗೆ ಯಾವುದು ನನ್ನದು ಎಂದು ಹಚ್ಚಿಕೊಂಡು ಮಾಡಿರುತ್ತೇವೋ ? ಅದು ನನ್ನದಾಗಿ ಉಳಿಯದೆ ಸರಿದು ಹೋಗಿರುತ್ತದೆ. ಯಾರಿಗೆ ನಾವು ಸಹಾಯ ಸಹಕಾರ ಮಾಡಿರುತ್ತೇವೊ ? ಅವರು 'ಕೃತಘ್ನ' ರಂತೆ ವರ್ತಿಸಿದಾಗ ಮನಸ್ಸಿಗೆ ನೋವಾಗುತ್ತದೆ.

ಇಂಥ ಸಂದರ್ಭದಲ್ಲಿ ನಾವು ಮಾಡಬೇಕಾದುದು ಇಷ್ಟೆ :

೧) ಬದುಕಿನಿಂದ ಸರಿದು ಹೋಗುವ ಕೆಲಸ ಕಡೆ ಮನಸ್ಸು ಹರಿಬಿಡದೆ ಮತ್ತೆ ಬದುಕಿನಲ್ಲಿ ಆಸಕ್ತಿ ಹುಟ್ಟಿಸುವ ಕೆಲಸಗಳಲ್ಲಿ ನಮ್ಮನ್ನು ನಾವು ತೊಡಗಿಸಿಕೊಳ್ಳಬೇಕು.

೨) ಹಿಂದೆ ಮಾಡಿದ ಕೆಲಸ ಕಾರ್ಯಗಳ ಬಗ್ಗೆ ಲೆಕ್ಕ ಹಾಕುತ್ತ ಮನಸ್ಸನ್ನು ಘಾಸಿಗೊಳಿಸದೆ ಅದೊಂದು ಜೀವನಾನುಭವ , ಅದು 'ನನ್ನ ಬಾಳಿನ ಬುತ್ತಿ' ಎಂದು ಅರಿಯಬೇಕು.

೩) ಯಾರು ನಮ್ಮ ಮನಸ್ಸಿಗೆ ಘಾಸಿ ಮಾಡಿದ್ದಾರೊ ಅವರಿಗೆ ಕೇಡು ಬಗೆಯುವ ಕುರಿತು ಆಲೋಚಿಸದೆ ಅವರಿಗೆ ಮತ್ತೆ ಮತ್ತೆ ಒಳ್ಳೆಯದೆ ಆಗಲಿ ಎಂದು ಹರಸಿ, ಹಾರೈಸಬೇಕು.

೪) ಓದುವ , ಬರೆಯುವ , ಸಂಗೀತವನ್ನು ತನ್ಮಯವಾಗಿ ಕೇಳುವ ಕಾರ್ಯದಲ್ಲಿ ನಮ್ಮ ಮನಸ್ಸನ್ನು ತೊಡಗಿಸಿಕೊಳ್ಳಬೇಕು.

೫) ಬದುಕಿನಲ್ಲಿ ಇಂದು ಬರುವ ಕಷ್ಟಗಳೆಲ್ಲವೂ ನಮ್ಮ ಮುಂದಿನ ಭವಿಷ್ಯದ ಸುಖಕ್ಕಾಗಿ ಎಂಬ ತಿಳುವಳಿಕೆ ನಿಮ್ಮಲ್ಲಿದ್ದರೆ ಬದುಕಿನ ಪಥದಲ್ಲಿ ನೀವು ಯಶಸ್ವಿ ಪಯಣಿಗರಾಗುತ್ತೀರಿ.

೦ ಎ.ವಾಯ್.ಪದ್ಮಾಕರ ಖಾನಾಪುರ

# ಅಡವಿ ದೆವ್ವ ಬಂದು ಮನೆಯಲ್ಲಿದ್ದವರನ್ನು ಓಡಿಸಿತು

ಬದಲಾದ ರಾಜಕೀಯ ಸನ್ನಿವೇಶದಲ್ಲಿ ಗುಲಬರ್ಗಾ ಜಿಲ್ಲೆಯ ಶಹಾಪುರ ಮತಕ್ಷೇತ್ರದ ಚುನಾವಣೆಯ ಕಣ ದಿನದಿಂದ ದಿನಕ್ಕೆ ರಂಗೇರುತ್ತ ನಡೆದಿದೆ. ಜನತಾದಳದಲ್ಲಿ ಇದ್ದು ಆ ಪಕ್ಷ ಕೊಡಮಾಡಿದ ಮಂತ್ರಿ ಸ್ಥಾನವನ್ನು ಹಾಯಾಗಿ ಅನುಭವಿಸಿ , ಆಮೂಲಕ ಸಾಕಷ್ಟು ದುಡ್ಡನ್ನು



ಕಮಾಯಿಸಿಕೊಂಡಿರುವ ಮಾಜಿ ಸಚಿವ ದರ್ಶನಾಪುರ ಶರಣಬಸ್ಸಪ್ಪ ಈ ಬಾರಿ ಇಲ್ಲಿ ಕಾಂಗ್ರೈನಿಂದ ಸ್ಪರ್ಧಿಸುತ್ತಿರುವುದು ವಿಶೇಷವಾಗಿದೆ. ಒಮ್ಮಿದೊಮ್ಮೆ ದರ್ಶನಾಪುರ ಕಾಂಗ್ರೆಸ್ ತೆಕ್ಕೆಗೆ ಹೋಗಿರುವುದು ತನ್ನ ರಾಜಕೀಯ ಚಟುವಟಿಗಾಗಿ ಇದ್ದರೂ ಇಡೀ ಕ್ಷೇತ್ರದ ಮೂಲ ಕಾಂಗ್ರೇಸಿಗರಿಗೆ ಇದರಿಂದ ಮೂಕವೇದನೆ ಅನುಭವಿಸುವಂತಾಗಿದೆ. ಇಷ್ಟು ವರ್ಷಗಳ ಕಾಲ ತಮ್ಮ ರಾಜಕೀಯ ಕಡುವೈರಿ ಎಂದು ಭ್ರಮಿಸಿಕೊಂಡು ದರ್ಶನಾಪುರ ಮತ್ತು ಗ್ಯಾಂಗ್‌ನ್ನು ವಿರೋಧಿಸುತ್ತ ಬಂದವರಿಗೆ , ಈಗ ಏಕ್ ದಂ ಅವರನ್ನು ಮನೆಗೆ ಕರೆದುಕೊಂಡು ಹೋಗಿ ಮಣೆ ಹಾಕಬೇಕಾದ ಸಂದಿಗ್ಧ ಸ್ಥಿತಿ ಎದುರಾಗಿದೆ . ಕೆಲವು ಜನ ಸಾಮಾನ್ಯ ಕಾರ್ಯಕರ್ತರಿಗಂತು ಬಹಿರಂಗವಾಗಿಯೆ "ಅಡವಿಯ ದೆವ್ವ ಬಂದು ಮನೆಯಲ್ಲಿದ್ದವರನ್ನು ಓಡಿಸಿತು "ಎಂದು ಹೇಳುತ್ತಿದ್ದಾರೆ.

ದರ್ಶನಾಪುರ ಕಾಂಗ್ರೈಗಳ ತೆಕ್ಕೆಗೆ ಸೇರಿರುವುದು ಆ ಪಕ್ಷಕ್ಕೆ ಬಲವನ್ನು ತಂದಿಕೊಟ್ಟಿರಬಹುದು. ಸ್ಥಳೀಯ ಪುರಸಭೆ, ತಾಲೂಕಾ ಪಂಚಾಯತಿ, ಜಿಲ್ಲಾ ಪಂಚಾಯತಿಯಲ್ಲಿ ದರ್ಶನಾಪುರ ಬೆಂಬಲಿತ ಸದಸ್ಯರ ಸಂಖ್ಯೆಯೂ ಹೆಚ್ಚಾಗಿರುವುದು ಇದಕ್ಕೆ ಕಾರಣವಾಗಿದೆ. ಜೊತೆಗೆ ದರ್ಶನಾಪುರ ಕೆ.ಬಿ.ಜೆ.ಎನ್.ಎಲ್.ನಲ್ಲಿ ನಡೆದಿದ ಅವ್ಯಾಹತ ಲೂಟಿಯ ಕೊಂಚ ಪಾಲು ಈ ಸಲದ ಚುನಾವಣೆಯಲ್ಲಿ ಸುರಿಯುವುದರಿಂದ ಕೆಲವು ಆಸೆ ಬರುಕ ಕಾಂಗ್ರೇಸಿಗರಿಗೆ ಬಾಯಲ್ಲಿ ಈಗಲೇ ನೀರೂರಿರುವುದು ಸುಳ್ಳಲ್ಲ. ಶರಣಬಸ್ಸಪ್ಪನನ್ನು ಇಷ್ಟು ವರ್ಷಗಳಿಂದ ಬಲ್ಲಂತೆ ಜಿಪುಣಾಗ್ರೇಸರ. ಆತ ತನ್ನ ಬಂಧು ಬಳಗ ಬಹಳವಾದರೆ ತನ್ನ ಜಾತಿಬಾಂಧವರನ್ನು ಬಿಟ್ಟು ಬೇರೆಯವರಿಗೆ ತನ್ನ ಹಣದ ನೀರಾವರಿಯನ್ನು ಹರಿಸದವ. ಏಕೆಂದರೆ ಕಳೆದ ಸಲದ ಚುನಾವಣೆಯ ಸಂದರ್ಭದಲ್ಲಿ ಕೆಲವು ಜನ ಕಾಂಗ್ರೆಸ್ ಕಾರ್ಯಕರ್ತರು ದರ್ಶನಾಪುರನನ್ನು ಹಿಡಕೊಂಡು ತಮ್ಮ ಐಸತ್ತಿಗೆ ತಕ್ಕಂತೆ ಕಮಾಯಿಸಿಕೊಂಡರಾಯಿತು ಎಂದು ಭ್ರಮಿಸಿದ್ದರು. ಅಂದಂತೆ ಶರಣಬಸವಪ್ಪ ಕೂಡ ಅವರಲ್ಲಿ ಆಶೆಗೆ ನೀರೆರೆಯುತ್ತ ನೀವೆಲ್ಲ ಕಂಟ್ರ್ಯಾಕ್ಟ ಲೈಸನ್ಸಗಳನ್ನು ತೆಗೆಸಿ ಇಡಿ , ನಾನು ಅಧಿಕಾರಕ್ಕೆ ಬಂದ ನಂತರ ನಿಮಗೆಲ್ಲ ಕೆಲಸಗಳನ್ನು ಕೊಡಿಸುತ್ತೇನೆ ಎಂದು ಹೇಳಿದ್ದ. ಇವರಿಂದ ಬಹುತೇಕ ಜನ ತಾವು ಈಗಾಗಲೇ ಬಹುದೊಡ್ಡ ಕಂಟ್ರ್ಯಾಕ್ಟರ್ ಗಳಾಗಿದ್ದೇವೆಂದು ಭಾವ ಲೋಕದಲ್ಲಿ ಹಾರಾಡುತ್ತಿದ್ದರು. ಆದರೆ ದರ್ಶನಾಪುರ ಗೆದ್ದು ಬರುತ್ತಲೇ ಅವರೆಲ್ಲರ ಕನಸುಗಳಿಗೆ ಎಳ್ಳು ನೀರು ಬಿಟ್ಟ ಸಂಗತಿ ಇನ್ನೂ ಹಸಿ ಹಸಿಯಾಗಿ ಇದೆ. ಇದೆಲ್ಲವನ್ನೂ ಸೂಕ್ಷ್ಮವಾಗಿ ನೋಡಿದ ಬಹುತೇಕ

ಜನ ಕಾಂಗ್ರೇಸಿಗರು ತಮ್ಮ ಜಂಘಾಬಲವನ್ನ ಕಳೆದುಕೊಂಡಿದ್ದಾರೆ. ಹೀಗಾಗಿ ಅವರೆಲ್ಲ ಮಾನಸಿಕವಾಗಿ ಹಿಂದೆ ಸರಿಯುತ್ತಾ ಮತ್ತೊಂದು ಪಕ್ಷದ ಕಡೆಗೆ ಆಶಾಭಾವನೆಯಿಂದ ನೋಡುತ್ತಿದ್ದಾರೆ.

**ತ್ರಿಶಂಕು ಸ್ಥಿತಿಯಲ್ಲಿ ಶಿವಶೇಖರಪ್ಪ ಶಿರವಾಳ :**

ಹಳೆಯ ಕಾಂಗ್ರೇಸಿಗ ಧರಂ - ಕರಂಗಳ ನಂಟನ್ನು ಹೊಂದಿರುವ ಮಾಜಿ ಶಾಸಕ ಶಿವಶೇಖರಪ್ಪ ಪಾಟೀಲ ಶಿರವಾಳನದು ಇದೀಗ ತ್ರಿಶಂಕು ಸ್ಥಿತಿ. ಕಾಂಗ್ರೇಸಿನಲ್ಲಿದ್ದೂ ಕಂಗಾಲಾಗಿರುವ ಪರಿಸ್ಥಿತಿ. ದರ್ಶನಾಪುರ ಶಾಸಕನಾಗಿರುವ ತನಕವೂ ಒಂದೇ ಒಂದು ಸಲ ಆತನ ಕೆಲಸಗಳ ಕುರಿತು ಪುನರಾವಲೋಕನ ಮಾಡದೆ , ವಿರೋಧ ಪಕ್ಷವಾಗಿದ್ದರೂ ಕ್ರೀಯಾಶೀಲವಾಗಿರದೆ, ತನ್ನದೇ ಪಕ್ಷದ ಜನಗಳನ್ನು ಸಂಘಟಿಸಲಾಗದ ಸೊಂಬೇರಿ. ಸಂಭಾವಿತ - ಯಾರಿಗೂ ಕೇಡುಬಗೆಯದವ ಎಂಬ ಟ್ರಂಪ್ ಕಾರ್ಡ ಒಂದನ್ನು ಬಿಟ್ಟರೆ , ಹೇಳಿಕೊಳ್ಳುವ ಯಾವ ಕ್ವಾಲಿಟಿಯ ಗುಣಗಳೂ ಇಲ್ಲ. ಇಷ್ಟು ವರ್ಷಗಳ ಕಾಲ ಶಿರವಾಳ- ಗುಲಬರ್ಗಾ - ಬೆಂಗಳೂರು ಅಂತೆಲ್ಲ ತಿರುಗಾಡಿ ಇದೀಗ ಜ್ಞಾನೋದಯವಾದವರಂತೆ ಕಾಂಗ್ರೇಸ್ ಟಿಕೇಟಿಗಾಗಿ ಹಲುಬುತ್ತಿದ್ದಾರೆ. ಕಾಂಗ್ರೇಸಿನಲ್ಲಿದ್ದೂ ಶಿವಶೇಖರಪ್ಪನ ಜೊತೆ ಇರದ ಬಹುತೇಕ ಜನರನ್ನು ಇತ್ತೀಚೆಗೆ ದೆಹಲಿಗೆ ಕರಕೊಂಡು ಹೋಗಿದ್ದ. ಅಲ್ಲಿ ಭೇಟಿಮಾಡಿದ ಪೃಥ್ವಿರಾಜ ಚವ್ಹಾಣನಂತೂ ಮುಖದ ಮೇಲೆಯೆ ನೀರಿಳಿಸಿ , ಮಲಾಮು ಪಚ್ಚಿ ಕಳಿಸಿದ. ಇದರಿಂದ ಹೌಹಾರಿರುವ ಶಿವಶೇಖರಪ್ಪಗೌಡ ತನ್ನ ಶಕ್ತಿ ಮೀರಿ ಪಕ್ಷದ ಟಿಕೆಟ್ ಹೊಡಕೊಳ್ಳಬೇಕೆಂಬ ತರಾತುರಿಯಲ್ಲಿದ್ದಾನೆ. ಹೀಗಾಗಿ ಕಂಡ ಕಂಡ ದೇವರಿಗೆ ಹರಕೆ ಮಾತ್ರವಲ್ಲ , ಸಿಕ್ಕ ಸಿಕ್ಕ ಚಿಲ್ಲರೆ ದೇವರು ಹೇಳುವವರ ಹತ್ತಿರವೂ ಹೋಗಿ ನತಮಸ್ತಕರಾಗಿ ದಿಂಡಿರುಳು ಬೀಳುತ್ತಿದ್ದಾರೆ.ತೀರಾ ಇತ್ತೀಚೆಗೆ ಶಹಾಪುರ ನಗರದ ಶ್ರೀದೇವಿ ಗಂಡ ಶರಣಪ್ಪ ಗೂಗಲ್ ಹತ್ತಿರ ಹೋಗಿ ಅಡ್ಡ ಬಿದ್ದದ್ದು ತಾಜಾ ಉದಾಹರಣೆಯಂತಿದೆ.



ಇಷ್ಟು ದಿನ ಇವರ ಜೊತೆಗೆ ಇರುವವರಂತೆ ಕಂಡು ಬರುತ್ತಿದ್ದ ಚಂದ್ರಶೇಖರ ಆರಬೋಳ, ಸಿದ್ಧಲಿಂಗಪ್ಪ ಆನೇಗುಂದಿ , ವೆಂಕಣ್ಣಗೌಡ ಹಾಲಬಾವಿ , ಬಸವರಾಜೇಂದ್ರ ದೇಶಮುಖ ಮುಂತಾದವರೆಲ್ಲ ಮಾನಸಿಕವಾಗಿ ದೂರ ಬಹುದೂರ ನಡೆದು ಹೋಗಿದ್ದಾರೆ ಅನಿಸುತ್ತದೆ. ಇನ್ನೇನು ಕೃತಜ್ಞತೆಗಾಗಿ ಎಂಬಂತೆ ಅಮಾತೆಪ್ಪ ಕಂದಕೂರ ಎಂಬ ಎಂ.ಎಲ್.ಸಿ. ಮಾತ್ರ ಜೊತೆಗೆ ಇದ್ದಾನೆ. ಸುರೇಂದ್ರ ಪಾಟೀಲ ಮಡ್ನಾಳ ಆದಾಗಲೇ ದರ್ಶನಾಪುರ ಶರಣಬಸಪ್ಪನ ಅಂತರಂಗದ ಕವಾಟಗಳಲ್ಲಿ ಸೇರಿಬಿಡುವ ಜೋರು ತಯಾರಿ ನಡೆಸಿದ್ದಾನೆ. ಇಷ್ಟು ದಿನ ಕಾಂಗ್ರೆಸ್ ಟಿಕೇಟ್‌ಗಾಗಿ ಹಂಬಲಿಸಿ , ಅದಕ್ಕಾಗಿ ಕೊಂಚ ಹಣವನ್ನೂ ಖರ್ಚು ಮಾಡಿಕೊಂಡಿದ್ದ ಸಿದ್ರಾಮಯ್ಯ ಗುಂಪಿನ ಡಾ. ಚಂದ್ರಶೇಖರ ಸುಬೇದಾರ - ದರ್ಶನಾಪುರ ಕಾಂಗ್ರೇಸಿಗೆ ಬಂದ ದಿನವೆ ತನ್ನ ರಾಗ ಬದಲಿಸಿ , ರಾಜಕೀಯ ಸಮ್ಮಂಧವರಿಗೆ ಅಲ್ಲ ಎಂದು ಪ್ರಾಕ್ಟೀಸ್‌ನಲ್ಲಿ ತೊಡಗಿದ್ದಾನೆ. ಇದೊಂದು ಬಾರಿಯೂ ಶಿವಶೇಖರಪ್ಪ ತನ್ನ ಅಸ್ತಿತ್ವ ಉಳಿಸಿಕೊಳ್ಳಬೇಕೆಂದೇನಾದರೂ ಯೋಚಿಸಿದ್ದರೆ ಜಾತಕ ಪಕ್ಷಿಯಂತೆ ಕಾಂಗ್ರೇಸ್ ಟಿಕೇಟಿಗಾಗಿ ಕಂಗಾಲಾಗಿ , ಎದೆಗುಂದಿ ಹೋಗದೆ ಬಿ.ಜೆ.ಪಿ. ಪಕ್ಷದತ್ತ ಹಣಕಿ ಹಾಕಿದರೆ ಆ ಪರಿಸ್ಥಿತಿಯೆ ಬೇರೆಯಾಗುತ್ತದೆ. ಆದರೆ ತನ್ನ ಜೊತೆಗೆ ಎಲ್ಲರನ್ನು ಕರಕೊಂಡು ಹೋಗುವ ತಾಕತ್ತು ಶಿವಶೇಖರಪ್ಪನಂಥ ಆಸಾಮಿಗೆ ಇದೆಯೆ ? ಎಂಬುದೆ ಸಧ್ಯದ ಪ್ರಶ್ನೆಯಾಗಿದೆ.

# ಮಡ್ಡಿಗೆ ಏನಾಗಿದೆ ?



ಅಳಿದ ಊರಿಗೆ ಉಳಿದವನೆ ಗೌಡ ಎನ್ನುವಂತೆ ದರ್ಶನಾಪುರ ತೊರೆದ ಪಕ್ಷಕ್ಕೆ ಮಲ್ಲಣ್ಣ ಮಡ್ಡಿ ಅನಿವಾರ್ಯ ಅಧ್ಯಕ್ಷ. ಈತನೂ ಈ ಬಾರಿ ಜೆ.ಡಿ.ಎಸ್.ವತಿಯಿಂದ ಚುನಾವಣೆಗೆ ನಿಲ್ಲುವ ತಯಾರಿ ನಡೆಸಿದ್ದಾನೆ. ಆದರೆ ಅದೇಕೋ ಅದು ಅಷ್ಟು ಜೋರು ಅನಿಸುತ್ತಿಲ್ಲ. ತಾಲೂಕಿನ ಅಧ್ಯಕ್ಷನಾಗಿಯೂ ತನ್ನ ಪಕ್ಷದ ಕಾರ್ಯಕರ್ತರನ್ನು ಹಿಡಿದು ನಿಲ್ಲಿಸದ ಮನಸ್ಥಿತಿಗೆ ಮಡ್ಡಿ ಇಳಿದಿದ್ದಾನೆ ಅನಿಸುತ್ತದೆ. ತನ್ನ ಕಣ್ಣ ಮುಂದೆಯೆ ಜೆ.ಡಿ.ಎಸ್.ನಿಂದ ಆಯ್ಕೆಯಾದ ಬಹುತೇಕ ಪುರಸಭೆಯ ಸದಸ್ಯರು ದರ್ಶನಾಪುರನ ಹಿಂದೆ ಕಾಂಗ್ರೆಸ್ ಮಡಿಲಿಗೆ ಜಾರುತ್ತಿದ್ದರೂ ಮೂಕಪ್ರೇಕ್ಷಕನಂತೆ ಕುಳಿತು ತನಗೆ ಬರುವ ಸುದೈವದ ಘಳಿಗೆಗಾಗಿ ಕಾದುಕುಂತ್ತಿದ್ದೇನೆ ಎಂದು ಹೇಳುತ್ತಿದ್ದಾನೆ. ಅದೃಷ್ಟ ಅದು ಕುಳಿತಕಡೆಗೆ ಬರುವುದಿಲ್ಲ. ಅದನ್ನು ಹುಡುಕಾಡಿ ಹೋಗಿ ಪಡೆಯಬೇಕು ಎಂಬ ಸಂಗತಿ ಅರಿಯದ ಮಡ್ಡಿ ಚುನಾವಣೆಯ ಅಖಾಡದಿಂದ ಆಗಲೇ ಅರ್ಧ ಸರಿದು ಹೋದಂತೆ ಕಂಡುಬರುತ್ತಿದೆ. ಒಂದು ವೇಳೆ ಚುನಾವಣೆಯನ್ನು ಗಂಭೀರವಾಗಿ ಪರಿಗಣಿಸಿದ್ದೆ ಆದರೆ ಮಲ್ಲಣ್ಣಮಡ್ಡಿ ಪ್ರಬಲ ಪೈಪೋಟಿ ನೀಡುವುದರಲ್ಲಿ ಯಾವುದೆ ಅನುಮಾನಬೇಡ. ಜನಸಾಮಾನ್ಯನೊಳಗೆ ಈಗಾಗಲೆ ಇರುವ ದರ್ಶನಾಪುರನ ವಿರೋಧಿ ಅಲೆಯನ್ನು ಬಳಸಿಕೊಳ್ಳುವ ತಾಕತ್ತು ಈ ಮಟ್ಟಿಗೆ ಯಾರು ಕೊಡಬೇಕು ?

ಬಿ.ಜೆ.ಪಿ ಪಕ್ಷದ ಅಧ್ಯಕ್ಷನಾದ ಡಾ.ಮಲ್ಲಣ್ಣಗೌಡ ಉಕ್ಕನಾಳ , ಮಲ್ಲಾಬಾದಿ ಈರಣ್ಣಗೌಡ ಇಬ್ಬರೂ ಟಿಕೇಟ್ ಆಕಾಂಕ್ಷಿಗಳಿದ್ದಾರೆ. ಇಬ್ಬರಲ್ಲಿ ಡಾಕ್ಟರ್ ಮಲ್ಲಣ್ಣಗೌಡನಿಗೆ ಟಿಕೇಟ್ ಸಿಕ್ಕುವ ಛಾನ್ಸುಗಳು ಅಧಿಕವಾಗಿವೆ. ಏಕೆಂದರೆ ದರ್ಶನಾಪುರನಂತಹ ರೊಕ್ಕಸ್ಥ ವ್ಯಕ್ತಿಯನ್ನು ಚುನಾವಣೆಯ ಮೂಲಕ ಹಣಿಯುವುದು ಸುಲಭವಾದ ಕೆಲಸವಲ್ಲ. ಜೊತೆಗೆ ಜಾತಿಯ ಬಲದ ದೃಷ್ಟಿಯಿಂದ ಮಲ್ಲಣ್ಣಗೌಡನದೂ ರೆಡ್ಡಿ ಜನಾಂಗ. ಸ್ವಭಾವತಃ ಒಳ್ಳೆಯ ವ್ಯಕ್ತಿ. ಯಾರಿಗೂ ಕೇಡು ಬಗೆಯ, ಸಾಧ್ಯವಾದರೆ ಒಳ್ಳೆಯದನ್ನು ಮಾಡುವ , ಕೀಳು ರಾಜಕೀಯದಿಂದ ದೂರ ಇರುವ ವ್ಯಕ್ತಿ. ಇದರಿಂದಾಗಿ ಮಲ್ಲಣ್ಣಗೌಡ ಈ ಬಾರಿ ಬಿರುಸಿನ ಕುಸ್ತಿಯನ್ನು ಆಡುತ್ತಾನೆ. ಏಕೆಂದರೆ ಬಹುತೇಕ ಜನ ಯುವ ಲಿಂಗಾಯತ ಹುಡುಗರೆಲ್ಲ ಚುನಾವಣೆಗಳಿಗಿಂತ ಬಹು ಮುಂಚೆಯೆ ಚಡ್ಡಿ ಹೊಲಸಿಕೊಂಡು , ಆಗಲೇ ತಾಲೀಮು ಶುರುಹಚ್ಚಿಕೊಂಡಿದ್ದಾರೆ. ಬಿ.ಜೆ.ಪಿ.ಯ ಬರ್ಜರಿ ಭಾಷಣಗಳ ಮೋಡಿ ಜನರನ್ನು ಮರಳು ಮಾಡಿದೆ. ಆದರೆ ಆ ಪಕ್ಷದ ಹಿಂದೆ ಇರುವ ಕೀಳು ಹುನ್ನಾರಗಳು , ಕುಂತಂತ್ರ ನಾಟಕಗಳು ಜನತೆಯ ಅರಿವಿಗೆ ಬಾರದೆ ಇರುವುದು ವಿಷಾದನೀಯ.ಒಟ್ಟಿನಲ್ಲಿ ಈ ಸಲದ ಚುನಾವಣೆಯಲ್ಲಿ ಯಾರು ಮೇಲೆದ್ದು ಬರುತ್ತಾರೋ ಅವರು ತಮ್ಮ ರಾಜಕೀಯ ಬೇರುಗಳನ್ನು ಮತ್ತಷ್ಟು ಆಳಕ್ಕೆ ಇಳಿಸಿಕೊಳ್ಳುವುದರಲ್ಲಿ ಯಾವುದೆ ಅನುಮಾನಬೇಡ

೦ ವರದಿಗಾರ



# ಧರ್ಮಗಳೆಲ್ಲವೂ ಕಾಡುಗಲ್ಲುಗಳೇ.....

ಆಯ್ಕೆ : ಅಮರೇಶ ಹಿರೇಮಠ

ಧರ್ಮ ಒಂದು ನಿಷ್ಪ್ರಾಣವಾದ ಕಾಡುಗಲ್ಲು. ಅದೇಷ್ಟೆ ಸನಾತನವಾಗಿರಲಿ ಅನುಭವಿಯಾಗಿರಲಿ ಕಲ್ಲು ಕಲ್ಲೇ. ನಿರ್ಜಿವ- ಮೃತ-ಎಂದೂ ಬದಲಾಗುವುದಿಲ್ಲ. ಅಸ್ತಿತ್ವದೊಂದಿಗೆ ಸಾಗುವುದಿಲ್ಲ. ಕಾಡುಗಲ್ಲು ಎಂದಾದರು ಹಾಡಿದುದನ್ನು ಕುಣಿದುದನ್ನು ತನ್ನಿಂದ ಇನ್ನೊಂದು ಜೀವಿಯನ್ನು ಸೃಷ್ಟಿಸಲು ಕಾರಣವಾಗಿದ್ದನ್ನು ಇದುವರೆಗೆ ಸಾಧ್ಯವಾಗಿಲ್ಲ ಮುಂದೆಂದೂ ಆಗೋಲ್ಲ! ಧರ್ಮ ಬರೀ ಗುಣವಂತಿಕೆ, ಮಡಿವಂತಿಕೆ ಅಷ್ಟೇ. ಅದು ಎಂದೂ ಸಂಘಟನೆಯಾಗಲು ಸಾಧ್ಯವಿಲ್ಲ! ಜಗತ್ತಿನಲ್ಲಿ ಇಂದು ಬೇಕಾದಷ್ಟು ಧರ್ಮಗಳಿವೆ ಸರಿ ಸುಮಾರು ಮುನ್ನೂರು. ಎಲ್ಲವೂ ಕಾಡುಗಲ್ಲುಗಳೇ.ಎಂದೂ ಚಲಿಸಿಲ್ಲ, ಬದಲಿಸಿಲ್ಲ, ಸಮಯದೊಂದಿಗೆ ಹೆಜ್ಜೆ ಹಾಕಿಲ್ಲ. ಜಡ ವಸ್ತುವಿನ ಹಾಗೆ ಅವುಗಳಿಂದ ಯಾವುದೇ ನೆರವು ಶಾಂತಿ ಸುಖಃ ನೆಮ್ಮದಿ ಇರಲಿಕ್ಕೆ ಸಾಧ್ಯವಾಗಿಲ್ಲ ಎಂಬುದು ಸತ್ಯ.

ಧರ್ಮ ಇವುಗಳೆಲ್ಲವನ್ನು ಮೀರಿದ ಒಂದು ರೀತಿಯ ಧಾರ್ಮಿಕತೆಯಿಂದ ತುಂಬಿರಬೇಕು. ಸತ್ಯದೊಂದಿಗೆ ಧೃಡವಾಗಿ ನೆಲಸಬಲ್ಲ ಶಕ್ತಿ-ಪ್ರಾಮಾಣಿಕತೆ-ಸಹಜತೆ, ಸಮಾನತೆ ಸ್ವಾಭಾವಿಕತೆ,ಪ್ರೇಮ ಪೂರ್ಣ ಅಸ್ತಿತ್ವದೊಂದಿಗೆ ಸ್ನೇಹ ಪೂರ್ಣವಾದ ಲಯ ಬದ್ಧತೆಗಳು ತುಂಬಿರಬೇಕು. ಇವುಗಳಿಗಾಗಿ ಯಾವ ಧರ್ಮಗ್ರಂಥಗಳನ್ನು ಪಠಿಸಬೇಕಾಗಿಲ್ಲ. ಏಕೆಂದರೆ ಜಗತ್ತಿನಲ್ಲಿ ಪವಿತ್ರಗ್ರಂಥವೆಂಬುದು ಎಲ್ಲೂ ಇಲ್ಲ. ಹಾಗೇ ಕರೆಯಲ್ಪಡುವವು ಬರೀ ಮೌಢ್ಯ, ಕೊಳಕು ಅಶ್ಲೀಲತೆಗಳಿಂದ ತುಂಬಿವೆ. ಈ ಜಗತ್ತಿನಲ್ಲಿ ಇದುವರೆಗೆ ವಾಸ್ತವಿವಾದ ಧರ್ಮವೆಂಬುದು ಇಲ್ಲವೇ ಇಲ್ಲ.

ಧಾರ್ಮಿಕತೆಯೆಂಬುದು ನಮ್ಮ ಹೃದಯದಲ್ಲಿ ನಡೆಯುವ ವಿಕಾಸ. ಅದು ತನ್ನ ಆತ್ಮವು ತನ್ನ ಇರುವಿಕೆಯ ಕೇಂದ್ರದ ಕಡೆಗೆ ನಡೆಯುವ ಒಂದು ವಿಶಿಷ್ಟ ವಿಧಾನ. ಯಾವಾಗ ನಾವು ಅಸ್ತಿತ್ವದ ಕೇಂದ್ರ ಬಿಂದುವನ್ನು ಸೇರುವಿರೋ ಆಗ ಸೌಂದರ್ಯ, ಆನಂದ ಹಾಗೂ ಶಾಂತಿಯ ದಿವ್ಯ ಪ್ರಭೆಯು ವಿಸ್ಫೋಟಿಸುವುದು. ಅಂತಹ ವ್ಯಕ್ತಿಯ ಜೀವನದಲ್ಲಿರುವ ಅಂಧಕಾರವು ಮರೆಯಾಗುವುದು.

ಜಗತ್ತಿನಲ್ಲೆಲ್ಲ ಧಾರ್ಮಿಕತೆಯೇ ವ್ಯಾಪಿಸುವಂತಿದ್ದರೆ ಎಲ್ಲ ಧರ್ಮಗಳೂ ವಿದಾಯ ಹೊಂದುತ್ತವೆ.ಮಾನವನು ಕೇವಲ ಮಾನವನಾಗಿ ; ಅವನು ಹಿಂದುವೂ ಅಲ್ಲ-ಮುಸಲ್ಮಾನನೂ ಅಲ್ಲ-ಕ್ರೈಸ್ತನೂ ಅಲ್ಲ ಕೇವಲ ಮಾನವನಾಗಿ ಉಳಿಯಬಹುದು. ಧಾರ್ಮಿಕತೆಯ ಗಾಳಿಯು ಎಂದಿನವರೆಗೆ ಬೀಸುವುದಿಲ್ಲವೋ ಅಂದಿನವರೆಗೆ ವಾಸ್ತವಿಕ ಧರ್ಮವು ಮೂಡಲಾರದು.

ಪ್ರೇಮ ಎಂಬುದು ಇಬ್ಬರು ವ್ಯಕ್ತಿಗಳ ನಡುವೆ ಘಟಿಸುವ ವೈಯಕ್ತಿಕ ಘಟನೆ. ಹಾಗೇಯೆ ಧಾರ್ಮಿಕತೆಯೂ ಸಹ ಓರ್ವ ವ್ಯಕ್ತಿಯು ಸಮಗ್ರ ಅಸ್ತಿತ್ವದೊಂದಿಗೆ ಸಮಷ್ಟಿಯಾಗಿ ಬೆಳೆಸಿಕೊಳ್ಳುವ ಮಹತ್ವದ ಘಟನೆ. ಧಾರ್ಮಿಕತೆಯೆಂಬುದು ಒಂದು ವ್ಯಕ್ತಿಗತ ವಿಷಯ- ತೀರ ಖಾಸಗಿ ವಿಚಾರ. ಅದು ವ್ಯಕ್ತಿಯ ಮೂಲಕ ಸಮಷ್ಟಿಗೆ ಕಳುಹಿದ ಪ್ರೇಮ ಸಂದೇಶ. ಧಾರ್ಮಿಕತೆಯ ಅಲೆ ಜಗತ್ತಿನಲ್ಲೆಲ್ಲ ಹರಡಿದರೆ ಮಾತ್ರ ವಿಶ್ವಶಾಂತಿ ಸಾಧ್ಯ. ಧಾರ್ಮಿಕತೆಯಿಂದ ಜಗತ್ತಿನ ಅಜ್ಞಾನಗಳೂ-ಎಲ್ಲಾ ಭ್ರಾಂತಿಗಳೂ ಮೌಢ್ಯಗಳೂ ತಾನಾಗಿ ನಿರ್ಮೂಲವಾಗುವುದು. ಇಲ್ಲವಾದರೆ ಈ ಧರ್ಮಗಳೆಲ್ಲವೂ ಮನುಷ್ಯನ ಶೋಷಣೆಯನ್ನು ಮಾಡುತ್ತವೆ. ಧರ್ಮಗಳು ಜನರನ್ನು ಅರ್ಥ ಭಾವಗಳಿಲ್ಲದ ಶಬ್ಧಗಳಿಂದ (ಮಂತ್ರ) ಪ್ರಾರ್ಥನೆ ಮಾಡುವಂತೆ ಬಲವಂತ ಗೊಳಿಸುವುವು. ಏಕೆಂದರೆ ಆ ಶಬ್ಧಗಳು ಕೇವಲ ಸ್ಮೃತಿಯಿಂದ ಬರುವುವು ಹೃದಯದಾಳದಿಂದ ಅಲ್ಲ.



## ತಹಶೀಲ್ದಾರ ಚವ್ಹಾಣ ಗಮನಕ್ಕೆ

# ದನ ಕಡಿಯುವ ಜಾಗ ಬದಲಾಯಿಸುವರೆ ?

ಒಂದೊಂದು ಸಲ ಅನಿಸುತ್ತದೆ. ಸರ್ಕಾರವೆ ಸತ್ತು ಹೋಗಿರುವುದೋ ? ಏನೋ ಎಂದು. ಯಾಕೆಂದರೆ ಎಲ್ಲಿಬೇಕೆಂದರಲ್ಲಿ ಯಾರ ಪರವಾನಿಗೆಯೂ ಇಲ್ಲದೆ ಅನವರತವೂ ನಡೆಸುತ್ತ ಬಂದಿದ್ದೇವೆ ಎಂಬ ಸಬೂಬು ಹೇಳುತ್ತ ಏನು ಬೇಕಾದರೂ ಮಾಡಬಹುದು. ಇದಕ್ಕೆ ಒಂದು ಜ್ವಲಂತ ಉದಾಹರಣೆ ಶಹಾಪುರದ ಹಳೆಪೇಟೆಯಲ್ಲಿರುವ ದನ ಕಡಿಯುವ ಸ್ಥಳವೂ ಒಂದು. ಹಿಂದೊಂದು ಸಂದರ್ಭದಲ್ಲಿ ಈ ಸ್ಥಳದ ಹಿಂದೆ -ಮುಂದೆ ಯಾರೂ ವಾಸಿಸುತ್ತಿರಲಿಲ್ಲ. ಈಗ್ಗೆ ನಾಲ್ಕೆಂಟು ವರ್ಷಗಳ ಹಿಂದಿನಿಂದಲೂ ಇದರ ಸುತ್ತ ಮುತ್ತ ಅನತಿ ದೂರದಲ್ಲಿಯೇ ಮನೆಗಳು ಹುಟ್ಟಿಕೊಂಡಿಕೊಂಡಿವೆ.

ಸರಕಾರದ ಪರವಾನಿಗೆ ಇಲ್ಲದೆ ತಮ್ಮ ಮನ ಬಂದಂತೆ ದನಗಳನ್ನು ಇಲ್ಲಿ ಕಡಿಯುತ್ತಾರೆ. ಒಂದೊಂದು ಸಲ ಆರೋಗ್ಯವಂತ ದನಗಳು ಸಹ ಇವರ ಮಚ್ಚಿಗೆ ಬಲಿಯಾಗುತ್ತಿರುವುದು ದುರಂತ. ಇದಲ್ಲದೆ ದಿನ ನಿತ್ಯ ಇಲ್ಲಿ ಕಡಿಯುವ ದನಗಳ ಮೌಂಸದ ದುರ್ನಾತ ಯಾರಿಗೂ ಸಹಿಸಲು ಸಾಧ್ಯವಿಲ್ಲ. ಇದನ್ನೆಲ್ಲ ಆರೋಗ್ಯಕರ ಮನಸ್ಸನ್ನು ಇಟ್ಟುಕೊಂಡು ಪ್ರಶ್ನಿಸಹೋದವರಿಗೆ 'ಕೋಮುವಾದಿಗಳು' ಎಂಬ ಹಣೆಪಟ್ಟಿ ಬೇರೆ !

ಕಣ್ಣಮೇಲೆ ಕೌದಿ ಹೊದ್ದುಕೊಂಡು ಕುಳಿತುಕೊಂಡಿರುವ ಸ್ಥಳೀಯ ದಂಡಾಧಿಕಾರಿಗಳಾದ ಚವ್ಹಾಣ ಇದನ್ನು ಪರಾಂಭರಿಸಿ ದನ ಕಡಿಯುವ ಜಾಗವನ್ನು ಬದಲಾಯಿಸಿ ತಮ್ಮ ಮರ್ಯಾದೆ ಉಳಿಸಿಕೊಳ್ಳುವರೆ ?

೦ ಮೇಘರಾಜ ಜಾಧವ ರಾಷ್ಟ್ರೀಯ ಹಿಂದೂ ಸೇನಾ

## ಪಂಕಜಕುಮಾರ ಪಾಂಡೆ ಗಮನಕ್ಕೆ

# ದರ್ಶನಾಪುರನ ಗೋಲ್‌ಮಾಲ್‌ಗೆ ಕಂಗಾಲಾಗಿರುವ ಪತ್ತಾರರು

ಶಹಾಪುರದ ಪುರಸಭೆಯನ್ನು ಮಾಜಿ ಶಾಸಕ ದರ್ಶನಾಪುರ ಸ್ವತಃ ತನ್ನ ಆಸ್ತಿ ಎಂದು ತಿಳಿದು ತನಗೆ ಮನ ಬಂದಂತಹ ರೀತಿಯಲ್ಲಿ ಆಡಳಿತವನ್ನು - ಕಾಮಗಾರಿಗಳನ್ನು ನಡೆಸಿಕೊಂಡು ಹೋಗುತ್ತಿರುವುದು ಎಲ್ಲರೂ ಬಲ್ಲ ಸಂಗತಿ. ಪಟ್ಟಣದ ಹಳೆಯ ತರಕಾರಿ ಮಾರುಕಟ್ಟೆಯ ಸ್ಥಳದಲ್ಲಿ ಐ.ಡಿ.ಎಸ್.ಎಂ.ಟಿ. ಯೋಜನೆಯ ಅಡಿಯಲ್ಲಿ ೨೩ ಮಳಿಗೆಗಳನ್ನು ನಿರ್ಮಿಸಲಾಗಿದೆ. ಈ ಮಳಿಗೆಗಳ ಒಟ್ಟು ಕಾಮಗಾರಿಗೆ ಮಾಡಿದ ಖರ್ಚು ಬಹುಶಃ ದರ್ಶನಾಪುರನ ಗೆಳೆಯ ಜೆ.ಇ.ರಾಜಕುಮಾರನೇ ಬಲ್ಲ !

ಸರಾಫ ಬಜಾರ ಗೆಂದು ಮೊದಲೇ ನಿರ್ಧರಿಸಿ ತಯಾರಿಸಿದ ಮಳಿಗೆಗಳು ಜಿಲ್ಲಾಧಿಕಾರಿಗಳ ಸಮ್ಮುಖದಲ್ಲಿ ,ಪಾರದರ್ಶಕವಾಗಿ ಹರಾಜು ನಡೆಯಬೇಕು ಎಂಬ ಕಾನೂನು ಇದೆ. ಆದರೆ ಮಾಜಿ ಸಚಿವ ತನ್ನ ಪವರ್ ಇಂಥವುಗಳಲ್ಲಿ ತೋರದೆ ಹೋದರೆ ಹೇಗೆ ? ಸರಾಫ ಬಜಾರದ ಕೆಲವು ಜನ ತನ್ನ ಚೇಲಾಗಳನ್ನು ತಾನಿರುವ ಐ.ಬಿ.ಗೆ ಕರೆಸಿ ತನ್ನ ಸಮ್ಮುಖದಲ್ಲಿ ತಾನೇ ಸೂಚಿಸಿ ಹಂಚುವುದು ಯಾವ ನ್ಯಾಯ ? ಮತ್ತೊಂದು ತಮಾಷೆಯೆಂದರೆ ಹೀಗೆ ಹಂಚಿಕೊಂಡವರು ಈಗಾಗಲೇ ನಗರದ ಮುಖ್ಯ ರಸ್ತೆಯ ಪುರಸಭೆಯ ಮಳಿಗೆಗಳನ್ನು ಹೊಡಕೊಂಡವರೆ ಆಗಿದ್ದಾರೆ. ಅಂಥವರಿಗೆ ಮತ್ತೆ ಮತ್ತೆ ಅಂಗಡಿಗಳನ್ನು ನೀಡಿ ಗೋಲ್‌ಮಾಲ್ ಮಾಡಿದ್ದಾರೆ.ಜೊತೆಗೆ ಅವರೆಲ್ಲರಿಗೂ ಮತ್ತೆ ಫ್ರಂಟ್ ಲೈನ್‌ನಲ್ಲಿರುವ ಮಳಿಗೆಗಳೇ ಸಿಕ್ಕವೆ.

ದರ್ಶನಾಪುರ ಹೀಗೆ ತಮ್ಮ ಪರವಾಗಿ ವಕಾಲತ್ತು ವಹಿಸಿದ್ದಕ್ಕೆ ನೋಂದಣಿಯೆ ಇಲ್ಲದ ಸಂಘದ

## ನಮ್ಮ ಧ್ವನಿ



ಅಧ್ಯಕ್ಷರಾದ ವಿಜಯಕುಮಾರ ಜೈನ್ ಹಾಗೂ ಕಾರ್ಯದರ್ಶಿ ವಿಜಯ ಮರ್ಮಾ ಎಲ್ಲ ಪತ್ರಾರರಲ್ಲಿ ತಲಾ ೨೫ ಸಾವಿರ ಹೊಡಕೊಂಡು ಕುಂತಿದ್ದಾರೆ. ಅದನ್ನು ದರ್ಶನಾಪುರಗೆ ಬೆಳ್ಳಿಯ ಕಡಗ ಹಾಗೂ ಗದೆ ನೀಡುವ ಮೂಲಕ ಸನ್ಮಾನಿಸಲಿದ್ದಾರಂತೆ. ಮಾಜಿ ಸಚಿವ ದರ್ಶನಾಪುರ ತಮ್ಮ ಮನೆಯ ಹಣವನ್ನು ಹೀಗೆ ಖರ್ಚುಮಾಡಿ ಮಳಿಗೆ ಕಟ್ಟಿಸಿದ್ದರೆ ಪತ್ರಾರರೆಲ್ಲ ಸನ್ಮಾನಿಸಬೇಕಾದದ್ದೆ. ಆದರೆ ದರ್ಶನಾಪುರ ಖರ್ಚು ಮಾಡಿದ್ದು ತಮ್ಮ ಮನೆಯ ಹಣವನ್ನೇನಲ್ಲವಲ್ಲ ?

ಜಿಲ್ಲಾಧಿಕಾರಿ ಪಂಕಜಕುಮಾರ ಪಾಂಡೆಯ ಕಣ್ಣುಗಳಿಗೆ ಪಟ್ಟಿ ಕಟ್ಟಿ ಸುಳ್ಳು ವರದಿ ತಯಾರಿಸಿ ಕಳಿಸಿದ ಪುರಸಭೆಯ ಅಧಿಕಾರಿಗಳಿಗೆ , ಬಡವರ ರೊಕ್ಕ ಪಡೆದು ತಮ್ಮ ಜೇಬಿನಲ್ಲಿ ಇಟ್ಟುಕೊಂಡಿರುವ ನಕಲಿ ಸಂಘದವರಿಗೆ ಶಾಸ್ತಿ ಕಲಿಸಬೇಕಿದೆ.ನಿಜವಾದ ಕೆಲಸಗಾರರಿಗೆ ಮಳಿಗೆ ನೀಡಬೇಕಿದೆ. ಇದು ಜಿಲ್ಲಾಧಿಕಾರಿಗಳಿಂದ ಸಾಧ್ಯವೆ ?

೦ ಗೋಪಾಲ ಎಸ್.ವಕೀಲರು

## ರಾಜಾರೋಷವಾಗಿ ಶುರುವಾಗಿರುವ ಮಟ್ಕಾ – ಸರಾಯಿ !

ಮಟ್ಕಾ ದಂಧೆಯನ್ನು ಹಲ್ಕಟ್ ದಂಧೆಯೆಂದೆ ಕರೆಯಲಾಗುತ್ತದೆ.ಸರಕಾರ ಇದನ್ನು ನಿಷೇಧಿಸಿದ್ದರೂ ಇದು ಹಿಂದಿನ ಬಾಗಿಲಿನಿಂದ ನಡೆಸಿರುವ ವ್ಯವಹಾರ ಕೋಟ್ಯಂತರ ರೂ.ಗಳ ಮೊತ್ತದ್ದು. ಈ ಕೀಳು ಮಟ್ಟದ ಆಟಕ್ಕೆ ಬಲಿಯಾದ ಬಹುತೇಕ ಕುಟುಂಬಗಳು ಬೀದಿಗೆ ಬಿದ್ದಿವೆ ಎಂಬುದರಲ್ಲಿ ಎರಡು ಮಾತಿಲ್ಲ.

ಇದೇ ರೀತಿಯ ಇನ್ನೊಂದು ದುರ್ ವ್ಯವಹಾರ ಸರಾಯಿಯದ್ದು. ,ಸರಾಯಿ ನಿಷೇಧಿಸಿರುವುದಾಗಿ ಹೇಳಿ ಬಡಾಯಿಕೊಚ್ಚಿಕೊಳ್ಳುವ ಸರಕಾರ ಕಳ್ಳ ಭಟ್ಟಿಯನ್ನು ನಿಯಂತ್ರಿಸುವಲ್ಲಿ ಸಂಪೂರ್ಣ ವಿಫಲವಾಗಿದೆ.

ಗುಲಬರ್ಗಾ–ರಾಯಚೂರು– ಬೀದರ ಜಿಲ್ಲೆಗಳ ಬಹುತೇಕ ತಾಲೂಕುಗಳಲ್ಲಿ ಇವುಗಳು ರಾಜಾರೋಷವಾಗಿ ನಡೆಯುತ್ತಿವೆ. ಪ್ರತಿ ತಿಂಗಳು ಸಂಬಂಧಿಸಿದ ತಾಲೂಕಾ ಪೋಲಿಸ್ ಮುಖ್ಯಾಧಿಕಾರಿಗಳಿಗೆ ಭಕ್ಷೀಸು ಫೀಕ್ಸ ಆಗಿದ್ದರಿಂದ ಅವರೂ ಖ್ಯಾರೆ ಅನ್ನೋದಿಲ್ಲ.

ಬಡವರ – ತಿಳುವಳಿಕೆ ಇಲ್ಲದವರ ಹಣದ ಜೊತೆ ಹೀಗೆ ಕಳ್ಳಮಳ್ಳಾಟ ಆಡುತ್ತಿರುವ ಚೋರದಂಧೆಯ ಘಟಿಂಗರ ವಿರುದ್ಧ ಘನವೆತ್ತ ರಾಜ್ಯಪಾಲರು ಕ್ರಮ ಕೈಗೊಳ್ಳುವರೆ ?

ಕಾದು ನೋಡಬೇಕು .

೦ ಸಾಯಿ ಇಜೇರಿ

## ನೀವೂ ಬರೆರಿ.....

ಪ್ರಿಯ ಓದುಗರೆ,

ಇದು ನಿಮಗಾಗಿಯೇ ಇರುವ ಅಂಕಣ. ಇದರಲ್ಲಿ ನೀವೂ ಬರೆಯಬೇಕು. ನಿಮ್ಮ ಸುತ್ತ ಮುತ್ತ ನಡೆದಿರುವ ಬಾರಾಬಾನಗಡಿಗಳ – ಭ್ರಷ್ಟ ವಹಿವಾಟುಗಳ ಕುರಿತು ಬರೆದು ಕಳಿಸಿರಿ. ''ನಿಮ್ಮ ದನಿಗೆ – ನಮ್ಮ ಧ್ವನಿಯನ್ನು'' ಸೇರಿಸುವ ಮೂಲಕ ಸಂಬಂಧ ಪಟ್ಟ ರಾಜಕಾರಣಿ – ಅಧಿಕಾರಿಗಳಿಂದ ಸ್ಪಷ್ಟ ಸಮಜಾಯಿಸಿಯನ್ನು ಪಡೆಯಲು ಪತ್ರಿಕೆ ಬಯಸುತ್ತದೆ.

ನಿಮ್ಮ ಒಳ ದನಿಗೆ ಪತ್ರಿಕೆ ಧ್ವನಿಯಾಗಬಯಸುತ್ತದೆ. ತಡವೇಕೆ ? ಬಿಳಿ ಹಾಳೆ ಪೆನ್ನು ಕೈಗೆತ್ತಿಕೊಳ್ಳಿ. ಬರೆದು ಕಳಿಸಿ. ನಿಮ್ಮ ಹೆಸರು ಪ್ರಕಟಿಸಬಯಸದವರ ಹೆಸರುಗಳನ್ನು ಪತ್ರಿಕೆ ಗೌಪ್ಯವಾಗಿ ಇಡಲಾಗುತ್ತದೆ.

೦ ಸಂಪಾದಕ

# ಹುಡುಗಿಯರ ಪ್ರೀತಿಯನ್ನು ಹೇಗೆ ಅಳೆಯಬೇಕು ?



೦ ೯೯೦೦೨೮೯೦೦೩
ದೇವೇಗೌಡ ಮುಂದಿನ ಜನ್ಮದಲ್ಲಿ ಯಾವ ರಾಜ್ಯದಲ್ಲಿ ಹುಟ್ಟಬಹುದು ?
**ಬಹುಶಃ ಬಿಹಾರದಂತಹ ಕಗ್ಗಾಡಿ (ಅನಾರ್ಕಿ)ನಲ್ಲೆ ಇರಬಹುದು !**

೦ ರತ್ನಾ ಎಸ್. ಸುರಪುರ
ಹುಡುಗಿಯರ ಹೃದಯದ ಪ್ರೀತಿಯನ್ನು ಯಾವುದರಿಂದ ಅಳೆಯಬೇಕು ?
**ಏಕಾಂತ ಹಾಗೂ ಮೌನದಲ್ಲೇ ಇದರ ಮಾಪನ ಸಿಗಬಹುದು**

೦ ಸುರೇಂದ್ರ ಎನ್.ಪಿ.ರಂಗಂಪೇಟೆ
ನಮ್ಮ ಕ್ಷೇತ್ರ ಕೋಣಗಳು ನಿಮ್ಮ ಮೈ ಮೇಲೆ ಏರಿ ಬಂದರೆ ?
**ಅವನ್ನು ಹಿಡಿದು ಸವಾರಿ ಮಾಡುವ ತಾಕತ್ತು ಇದೆ ಕಣ್ರೀ.....**

೦ ಶ್ರೀನಿವಾಸದೇಶಪಾಂಡೆ ಕಲಬುರ್ಗಿ
ಗಂಡು ಹೆಣ್ಣಿಗೆ ತಾಳಿ ಕಟ್ಟುತ್ತಾರೆ. ಆದರೆ ಹೆಣ್ಣು ಗಂಡಿಗೆ..... ?
**ಮೂಗುದಾರ**

೦ ಭೀಮರೆಡ್ಡಿ ಹಂಗರಗಿ ಶಹಾಪುರ
ಕ್ಯಾನ್ಸರ್ ಬಿಜೆಪಿಯನ್ನು ಅಪ್ಪಿಕೊಳ್ಳಲು ಎಲ್ಲರೂ ಈಗೀಗ ತುದಿಗಾಲ ಮೇಲೆ ನಿಂತಿದ್ದಾರಲ್ಲ ?
**ವಿನಾಶಕಾಲೇ ವಿಪರೀತ ಬುದ್ಧಿ ಎಂಬ ಮಾತು ಕೇಳಿಲ್ಲವೆ ?**

೦ ರಾಜಶೇಖರ ಮಲ್ಕಂಡಿ ಲಾಡ್ಲಪೂರ
ನಾನು ರಾಜಕೀಯಕ್ಕೆ ಹಾರಬೇಕೆಂದಿದ್ದೇನೆ ಹೇಗೆ ?
**ಚೆಡ್ಡಿ ತೊಟ್ಟರೆ ಮಾತ್ರ ಈಗ ಸಲೀಸು**

೦ ನೀಲಮ್ಮ ಹಿರೇಮಠ ಗುಲಬರ್ಗಾ
ದೇವೇಗೌಡರ ದಳ ಈಗ ದಳ ದಳವಾಗಿ ಉದುರಿ ಹೋಗುತ್ತಿರಲು ಕಾರಣ ?
**ಛೆ ! ಪಾಪ ರಾಧಿಕಾಳಂತೂ ಅಲ್ಲವೇ ಅಲ್ಲ**

೦ ಮಲ್ಲಿಕಾರ್ಜುನ ಮೇಟಿ ಮಾನವಿ
ಪೇಜಾವರ ಕಡ್ಡಿಯಂತೆ ತೆಳ್ಳಗಿದ್ದರು ರೇಶ್ಮೆಯಷ್ಟು ಖಡಕ್ ಯಾಕೆ ?
**ಅದೇ ತಿಳಿಸಾರು ಮಹಿಮೆ ಕಣೋ**

೦ ಸುಮಿತ್ ಎಸ್.ಫಿರಂಗಿ
ವಿದ್ಯಾವಂತ ಸಮಾಜಗಳಲ್ಲಿಯೂ ಬಹಿಷ್ಕಾರದಂಥ ಪದ್ಧತಿ ಇದೆ ಅಂದ್ರೆ ಏನರ್ಥ ?
**ಆ ಸಮಾಜದಲ್ಲಿ ಎಲ್ಲರೂ ನರಸತ್ತವರೆ ಇದ್ದಾರೆಯೆ ?**

೦ ಪಿ.ಬಿ. ಸುರೇಶ ಯಾದಗಿರ
ಸಮ್ಮಿಶ್ರ ಗಡಂಗಿಗೂ ಈಗ ಇಳಿಗಾಲ ಆರಂಭವಾಗಿದೆಯೆ ?

## ಕವಡೇಕಾಯಿ

ಅದು ಇಳಿಗಾಲ ಅಲ್ಲ , ಅಳಿಗಾಲ ಮಾರಾಯಾ

೦ ೯೯೮೬೦೯೨೫೧೯
ಭಯೋತ್ಪಾದಕರಿಗೂ ನಿಮಗೂ ನಂಟೆ ?
ಭಯೋತ್ಪಾದಕರಿಗಿಂತ ಭಗವ್ರೋತ್ಪಾದಕರು ಇನ್ನೂ ಡೆಂಜರ್ ಮಾರಾಯಾ !

೦ ಚಂದ್ರಶೇಖರ ಬಳಗಾನೂರ ಶಹಾಬಾದ
ಯಜ್ಞಗಳನ್ನು ಮಾಡುವುದರಿಂದ ದೇಶದ ಗಂಡಾಂತರ ತಪ್ಪಿಸಬಹುದಂತ್ತಲ್ಲ.... ?
ದೇಶದ್ದೇನಾದರೂ ಆದೀತು. ಮೊದಲು ಮಾಡಿಸುವವರ ಗಂಡಾಂತರವಂತೂ ಗ್ಯಾರಂಟಿ ತಪ್ಪುತ್ತದೆ.

೦ ಮಲ್ಲು ಆಲೂರ ೯೯೭೨೪೭೭೬೪೯
ದರ್ಶನಾಪುರ ಹಾಗೂ ಶಿರವಾಳ ಇವರಿಗೆ ಶಹಾಪುರಕ್ಕೆ ಮುಕ್ತಿ ಯಾವಾಗ ಗುರು ?
ನಿಮ್ಮ ಮನದ ಕೂಗು ಎಲ್ಲರ ಕೂಗಾದಾಗಲೇ ಅದು ಸಾಧ್ಯ

೦ ರವೀಂದ್ರಭಟ್ಟ ಯಾದಗಿರ
ಹೆಂಡತಿಯನ್ನು ಗಂಡ ಚಿನ್ನ ರನ್ನ ಎಂದು ರಮಿಸುವುದ್ಯಾಕೆ ?
ಅಸಲಿ ಚಿನ್ನ ವೆಂದರೆ ಛಳಿ ಜ್ವರ ಬರುವುದರಿಂದ ಹೆಂಡತಿಗಾದರೂ ಕರೆದು ತೃಪ್ತಿ ಪಟ್ಟುಕೊಳ್ಳಬಾರದೆ ?

೦ ಚೆನ್ನಾರೆಡ್ಡಿ ಪಾಟೀಲ ಜೇವರ್ಗಿ
ಸಾಹಿತಿ - ಪತ್ರಕರ್ತರೆಲ್ಲ ಈಗೀಗ ಸಿನೆಮಾ ಕ್ಷೇತ್ರಕ್ಕೆ ವಲಸೆ ಹೋಗುತ್ತಿರುವ ಗುಟ್ಟೇನು ಗುರುವೆ ?
ಅವರು ಬರೆದ ಸಾಹಿತ್ಯಕ್ಕೆ ಅವರೇ ಓದುಗರಾಗಿದ್ದರಿಂದ.....

೦ ಸಂಗಮೇಶ ಆರ್. ಗುಲಬರ್ಗಾ
ಬಿಜೆಪಿಯ ಪುಢಾರಿಗಳೆಲ್ಲ ಈಗ ಹೊಸ ಹುಮ್ಮಸ್ಸಿನಿಂದ ತಿರುಗಾಡುತ್ತಿರಲು ಕಾರಣವೇನು ?
ಇತ್ತೀಚೆಗೆ ಅವರಿಗೆ ಉಟ್ಟುಕೊಳ್ಳಲು ಹೊಸ ಹೊಸ ಅರಿವೆಗಳು ಸಿಕ್ಕಿವೆ

೦ ಟಿ.ಪ್ರಕಾಶ ಹಿರಿಯೂರು
ಹೆಣ್ಣು ಮಾಯೆ ಯಾದರೆ ಗಂಡು ?
ಆಕೆಯ ಗಂಡಾಂತರವಾದ್ದರಿಂದ....

೦ ಮ.ಇಬ್ರಾಹಿಂ ಕೆಂಭಾವಿ
ನಮ್ಮ ಎದುರು ಮನೆಯ ಹುಡುಗಿ ನನ್ನ ಹೃದಯವನ್ನು ಯಾವಾಗಲೋ ಕದ್ದಾಳಲ್ರೀ ?
ಎಮ್ಮೆ ತಮ್ಮಣ್ಣಗಳ ಹಣೆಬರಹವೇ ಹೀಗೆ

೦ ಅಶೋಕ ಪಿ.ಎಸ್. ಸುರಪುರ
ನಾನು ಆತ್ಮವಂಚನೆಯಿಂದ ಬದುಕುತ್ತಿದ್ದೇನೆ ಏನು ಮಾಡಲಿ ?
ಸರಿ, ಇನ್ನು ಮುಂದಾದರೂ ಆತ್ಮ ತೃಪ್ತಿಯಿಂದ ಬದುಕಿ

## ನಿವೇದನೆ

ಪ್ರೀತಿಯ ಯುವ ಓದುಗರೆ,

ಇದು ನಿಮ್ಮ ವ್ಯೈ ಮನಗಳಿಗೆ ಕಚಗುಳಿ ಇಡುವ ತಮಾಷೆಯ ಅಂಕಣ. ಈ ಅಂಕಣಕ್ಕೆ ತಾವೂ ಪ್ರಶ್ನೆಗಳನ್ನು ಅಂಚೆ ಕಾರ್ಡಿನಲ್ಲಿ ಬರೆದು, ಇಲ್ಲವೆ ೯೪೮೦೧೬೧೩೧೫ ಗೆ ಎಸ್.ಎಂ.ಎಸ್.ಮೂಲಕವೂ ಕೇಳಬಹುದು.

- ಸಂಪಾದಕ

# ಪ್ರಧಾನಿ ಲಾಲಬಹಾದ್ದೂರ ಶಾಸ್ತ್ರಿಗಳೂ ಸೀರೆ ಖರೀದಿಸಿದ್ದರು....



ಲಾಲ ಬಹಾದ್ದೂರ ಶಾಸ್ತ್ರಿಯವರಂತಹ ಪ್ರಧಾನಿಗಳು ನಮ್ಮ ದೇಶದಲ್ಲಿ ಇದ್ದು ಪ್ರಧಾನಿಯಾಗಿ ಆಳ್ವಿಕೆ ನಡೆಸಿದರು ಎಂಬುದೇ ಸೋಜಿಗವಾಗಿ ಕಾಣಿಸುತ್ತದೆ. ಅವರ ಬದುಕು ಇಂದಿಗೂ ಎಂದಿಗೂ ಆದರ್ಶಪ್ರಾಯವೇ ಆಗಿದೆ.

ಶಾಸ್ತ್ರಿಯವರು ಪ್ರಧಾನಿಯಾಗಿದ್ದಾಗ ಒಂದು ಸಲ ಅವರ ಹೆಂಡತಿಯ ಅಪೇಕ್ಷೆಯ ಮೇರೆಗೆ ಸೀರೆ ಖರೀದಿಗಾಗಿ ಒಂದು ಸಲ ಬಟ್ಟೆಯ ಅಂಗಡಿಯೊಂದಕ್ಕೆ ಹೋಗುತ್ತಾರೆ. ಆ ಬಟ್ಟೆ ಅಂಗಡಿಯವನಾದರೋ ಸ್ವತಃ ದೇಶದ ಪ್ರಧಾನಿಗಳು ತಮ್ಮ ಅಂಗಡಿಗೆ ಬಂದಿದ್ದಾರೆಂದು ಸಂಭ್ರಮದಿಂದ ಆನಂದತುಂದಿಲನಾಗಿ ಏನಪ್ಪಣೆ ? ಎಂಬಂತೆ ಕಾದಿರುತ್ತಾನೆ.

ಶಾಸ್ತ್ರಿಯವರಾದರೋ ಸಹಜವಾಗಿ ತಮ್ಮ ಹೆಂಡತಿಗೆ ಒಂದು ಸೀರೆ ಬೇಕೆಂದು ಅದರ ಖರೀದಿಗಾಗಿ ಬಂದಿರುವುದಾಗಿ ತಿಳಿಸಿದಾಗ ಆ ಅಂಗಡಿಯ ಮಾಲೀಕ "ಇಷ್ಟಕ್ಕೆ ನೀವೇಕೆ ಬರಬೇಕು. ಯಾರೊಂದಿಗಾದರೂ ಹೇಳಿಕಳಿಸಿದ್ದರೆ ಅಮ್ಮಾವ್ರೀಗೆ ಬೇಕಾದಂತಹ ಸೀರೆಗಳನ್ನು ಮನೆಗೆ ನಾನೇ ತೆಗೆದುಕೊಂಡು ಬರುತ್ತಿದ್ದೆ ... "ಎಂದು ಒಂದೆ ಸಮ ವಿನೀತ ಭಾವದಿಂದ ನಿಲ್ಲುತ್ತಾನೆ.

ಆಗಲೂ ಶಾಸ್ತ್ರಿಯವರು "ಸರಿಯಪ್ಪ ಸೀರೆ ತೋರಿಸು" ಎಂದೆನ್ನುತ್ತಾರೆ. ಕೂಡಲೇ ಸಾವಿರಾರು ರೂಪಾಯಿ ಬೆಲೆಬಾಳುವ ಸೀರೆಗಳೆಲ್ಲ ಅವರ ಮುಂದೆ ಹರವಿ ಬಿಡುತ್ತಾನೆ. ಆಗ ಶಾಸ್ತ್ರಿಯವರು ಏನು ಹೇಳುತ್ತಾರೆ ಗೊತ್ತೆ ? "ಇಷ್ಟು ತುಟ್ಟಿಯ ಸೀರೆಗಳು ತೋರಿಸಬೇಡಪ್ಪ.... ಕಡಿಮೆ ಬೆಲೆಯ ಸೀರೆಗಳನ್ನು ತೋರಿಸು....." ಎಂದು ಹೇಳಿದಾಕ್ಷಣ ಅಂಗಡಿಯ ಮಾಲೀಕ ಕ್ಷಣ ಕಕ್ಕಾವಿಕ್ಕಿಯಾಗುತ್ತಾನೆ. "ನೀವು ಯಾವುದಾದರೂ ಒಯ್ಯಿರಿ..... ಹಣದ ಪ್ರಶ್ನೆ ಏಕೆ ? "ಎಂದು....... ತನ್ನ ಮಾತನ್ನು ಅರ್ಧದಲ್ಲೆ ನುಂಗುತ್ತಾನೆ. ಆಗಲೂ ಶಾಸ್ತ್ರಿಯವರು "ಅದೆಲ್ಲ ಬೇಡ. ಕಡಿಮೆ ಬೆಲೆಯ ಸೀರೆ ತೋರಿಸು "ಎಂದು ಪ್ರಧಾನಿಯಾಗಿಯೂ ವಿನಯದಿಂದಲೆ ಹೇಳುತ್ತಾರೆ. ಪುಕ್ಕಟ್ಟೆ ಸಿಗುತ್ತವೆ ಎಂದಾಗ ನನಗೂ ಇರಲಿ ನಮ್ಮಪ್ಪನಿಗೂ ಇರಲಿ ಎಂಬ ನಮ್ಮ ಇಂದಿನ ಸ್ವಭಾವಕ್ಕೂ ಶಾಸ್ತ್ರಿಯವರ ಸ್ವಭಾವಕ್ಕೂ ಎಷ್ಟು ವ್ಯತ್ಯಾಸ ಇದೆಯಲ್ಲವೆ ? ಅಂಗಡಿಯಾತ ಅನಿವಾರ್ಯವಾಗಿ ಶಾಸ್ತ್ರಿಯವರಿಗೆ ತೀರಾ ಕಡಿಮೆ ಬೆಲೆಯ ಸೀರೆಗಳನ್ನು ತೋರಿಸುತ್ತಾನೆ. ಶಾಸ್ತ್ರಿಯವರು ಅವನ್ನೆ ಹಣ ಕೊಟ್ಟು , ರಶೀದಿ ಪಡೆದು ತರುತ್ತಾರೆ.

ಇಂಥ ಸರಳ - ಸಜ್ಜನಿಕೆಯ ಪ್ರಧಾನಿಗಳನ್ನು ನಾವು ಇಂದು ಹಗಲು ಹೊತ್ತಿನಲ್ಲಿ ದೀಪ ಹಚ್ಚಿ ಹುಡುಕಿದರೂ ಸಿಕ್ಕುವುದಿಲ್ಲ. ಲಾಲಬಹಾದ್ದೂರ ಶಾಸ್ತ್ರಿಯಂಥ ಉನ್ನತ ವ್ಯಕ್ತಿತ್ವದ ಘನ ವ್ಯಕ್ತಿಗಳು ಇಂದು ನಮ್ಮ ದೇಶದಲ್ಲಿ ಎಷ್ಟು ಪ್ರಮಾಣದಲ್ಲಿ ಇದ್ದಾರೆ ? ಇಂಥವರನ್ನು ಗುರುತಿಸುವ ಕಣ್ಣುಗಳು ನಮ್ಮಲ್ಲಿ ಇಲ್ಲವಾಗುತ್ತಿದೆ ಏಕೆ ?



# ಏನೋ ಒಂಥರ........

ಡಿಯರ್ ಲವ್ವರ್

"ನಿನ್ನ ಕಣ್ಣ ಕನ್ನಡಿಯಲ್ಲಿ ಕಂಡೆ ನನ್ನ ಬಿಂಬ....." ಎಂಬ ಹಳೆಯ ಹಾಡು ನಮ್ಮ ಮನೆಯಲ್ಲಿ ಆಗಾಗ ಕೇಳಿದ್ದೆ. ಆದರೆ ಅದನ್ನು ಅಷ್ಟು ಗಮನವಿಟ್ಟು ಕೇಳಿರಲಿಲ್ಲ. ಯಾವಾಗ ನಿನ್ನೊಂದಿಗೆ ನನ್ನ ಕಣ್ಣುಗಳು ಕಲೆತು ಹೋದವೋ ಆ ಹಾಡಿಗೂ ಈಗೀಗ ಹೊಸ ಅರ್ಥ ಸ್ಪುರಿಸುತ್ತಿದೆ.

ನಿಂತಲ್ಲಿ ನಿಲ್ಲದ , ಕುಳಿತಲ್ಲಿ ಕೂಡದ, ಏನೋ ಒಂಥರ ಕಚಗುಚಿ ಮನದ ತುಂಬೆಲ್ಲ ತುಂಬಿಬಿಟ್ಟಿದೆ. ಯಾವಾಗ ನಿನ್ನ ಕಂಡೇನು ? ಹತ್ತಿರ ಹತ್ತಿರ ಕುಳಿತು ಮಾತಾಡೇನು ? ಎಂಬ ತಳಮಳ. ಅದೇನೋ "ಕುಂತ್ರೆ ನಿಂತ್ರೆ ಅಂವ್ದೆ ಧ್ಯಾನ ಮನಸಿಗಿಲ್ಲ ಸಮಾಧಾನ.....ಅವ್ನೆ ನನ್ನ ಗೇಣೆಕಾರ... "ಎಂದು ಹೇಳುತ್ತಾರಲ್ಲ, ಹಾಗಾಗಿದೆ ನನ್ನ ಪಾಡು. ಛೇ...... ಈ ಸಮಯವೂ ಹಾಗೆ. ಅದು ಕೂಡ ನನ್ನನ್ನು ತುಂಬಾ ಸತಾಯಿಸುತ್ತಿದೆ.

ಒಂದೊಂದು ಸಲ ನಾನು ಕುಳಿತಲ್ಲಿಯೇ ಕುಳಿತು ಉಗುರು ಕಚ್ಚುತ್ತಾ ನಿನ್ನ ನೆನಪಿನಲ್ಲಿ ವಿಹರಿಸುತ್ತಿರುತ್ತೇನೆ.ಆಗ ಇದ್ದಕ್ಕಿದ್ದಂತೆಯೆ ಅವ್ವ ಮಾತಾಡಿಸಿ: " ಏನಾಗಿದೆ ? ಹಿಂಗ್ಯಾಕ ಕುಂತಿ ? " ಅಂತ ಕೇಳಿದಾಗ ಮಾತು ತಡವರಿಸುತ್ತವೆ.ನನ್ನನ್ನು ಸಂಪೂರ್ಣ ಆವರಿಸಿಕೊಂಡಿರುವಿ. ನೀನು ಸದಾ ಕಾಡುತ್ತಲೆ ಇರುತ್ತಿ. ನನಗೆ ಮಾತೇ ಹೊರಡುವುದಿಲ್ಲ. ಬರೀ ಮುಗುಳ್ನಗು ಮಾತ್ರವೆ ಹೊರಬರುತ್ತದೆ. ಇದೊಂಥರ ಪ್ರೇಮ ರೋಗ ಎಂದು ನನ್ನ ಗೆಳತಿಯರನೇಕರು ನನ್ನನ್ನು ಛೇಡಿಸುತ್ತಲೆ ಮಾತಾಡಿದ್ದಾರೆ. ಆಗಲೂ ನಾನು ಮೌನಿಯೆ.

ನಿಜ. ಯಾವಾಗ ನೀ ನನ್ನ ಮನದ ಪ್ರತಿ ಪುಟ ಪುಟಗಳಲ್ಲಿ ಚಿತ್ತಾರದ ರೇಖೆಗಳನ್ನು ಬಿಡಿಸಿದೆಯೊ ? ಅಂದಿನಿಂದಲೆ ನನ್ನಿಡಿ ಮೈ ನಿನಗಾಗಿ ತಹತಹಿಸುತ್ತಿದೆ. ಅಕ್ಕಮಹಾದೇವಿಯಂಥ ವಿರಾಗಿಣಿಯೂ ತನ್ನ ವಚನವೊಂದರಲ್ಲಿ ಹೇಳುತ್ತಾಳಲ್ಲ " ಅಪ್ಪಿದರೆ ಅಸ್ಥಿಗಳು ನುಗ್ಗು ನುಸಿಯಾಗಬೇಕು "ಅಂತ ಹಾಗೆ ನಿನ್ನೊಂದಿಗೆ ನಾನು ಲಯವಾಗುವಾಸೆ. " ನನ್ನೊಳಗೆ ನೀನು. ನಿನ್ನೊಳಗೆ ನಾನು" ಎಂಬಂಥ ಭಾವ ಅದೇಕೋ ತೀವ್ರವಾಗುತ್ತಿದೆ.



ನನ್ನೊಳಗೆ ನಿನ್ನ ಬಗೆಗಿನ ವ್ಯಾಮೋಹದ ಕಿಚ್ಚು ದಿನ ದಿನಕ್ಕೆ ಹೆಚ್ಚಾಗುತ್ತಿದೆ. ಮತ್ತೊಂದು ಸಂಗತಿ : ಇಷ್ಟು ದಿನ ಎಷ್ಟು ಎಕರಲಾಡಿದರೂ ನನ್ನ ಕೈ ಹಿಡಿಯದ ನನ್ನ ಕಾವ್ಯ ಕನ್ನಿಕೆ , ನಿನ್ನ ಸ್ನೇಹದಿಂದ ನನ್ನನ್ನು ಮತ್ತೆ ಬಿಗಿದಪ್ಪಿದ್ದಾಳೆ. ನೀ ಸಮೀಪ ಇಲ್ಲದ ಈ ಘಳಿಗೆಯೂ ಆಕೆ ನನ್ನ ಹಿಡಿದೆ ಮುನ್ನಡೆಯುತ್ತಿದ್ದಾಳೆ. ಕಾವ್ಯದ ರಸಧಾರೆ ತನ್ನಿಂದ ತಾ... ಉಕ್ಕಿ ಹರಿಯುತ್ತಿದೆ.

ನಿನ್ನ ಪ್ರೀತಿಯ... ಕನಸು

## ಕನಸು

ಒಗ್ಗಿ ಹೋಗಿದೆ
ನೋವುಗಳಿಗೆ
ಮನಸು
ಒದ್ದೆ ಕಣ್ಣುಗಳಲಿ
ನಗುವಿದ್ದರೂ,
ಒತ್ತರಿಸಿಕೊಂಡು
ಬರುತಿದೆ
ಮುನಿಸು
ಮೋಸದ
ಅರಿವು
ಮೊದಲೇ ಇದ್ದಿದ್ದರೆ
ಕಾಣುತ್ತಲೇ
ಇರಲಿಲ್ಲವೇನೋ
ಪ್ರೇಮದ
ಕನಸು !

## ಕಾವ್ಯಾಂಕುರ

ಡಾ.ಪ್ರಭುರಾಜ ಬಳ್ಳೂರಗಿ

ಹೈಕುಗಳು

ಕಳೆದು ಹೋಗಿರಬಹುದು
ನನ್ನ ನೆನಪಲ್ಲಿ
ಒಮ್ಮೆಯಾದರೂ
ನೀನೂ......
ತೆರೆದ ಕಂಗಳಲಿ
ಇರುಳ ಸವೆಸಿರಬಹುದು
ನೀನೂ......
ದುಃಖ ಮರೆಮಾಚಲೆಂದೆ
ಸದಾ ನಗುತಿರಬಹುದು
ನೀನೂ.....
ನಿಜ ಹೇಳು
ನಗು ನಗುತ್ತಲೆ
ಅತ್ತಿರಲೂ ಬಹುದಲ್ಲವೆ ?
ನೀನೂ..... ?!



ಡಾ.ಪ್ರಭುರಾಜ ಬಳ್ಳೂರಗಿ ಸದ್ಯ ಶಹಾಪುರದಲ್ಲಿ ಡಾಕ್ಟರ್ ಪ್ರ್ಯಾಕ್ಟಿಸ್ ಮಾಡುತ್ತಿರುವ ಕನಸು ಗಣ್ಣಿನ ಹುಡುಗ. ಓದುವ ಬರೆಯುವ ಕ್ರೀಯೆಯಲ್ಲಿ ತನ್ನನ್ನು ತೊಡಗಿಸಿಕೊಂಡು ಯಾರಿಗೂ ಕಾಣದೆ ಬದುಕುತ್ತಿರುವ ಒಂದು ಯುವ ಪ್ರತಿಭೆ.

## ಪತ್ರಿಕೆಗಾಗಿ ವರದಿಗಾರರು ಬೇಕಾಗಿದ್ದಾರೆ

ಆತ್ಮೀಯ ಮಿತ್ರರೆ,

ಪತ್ರಿಕೆಯ ಇತ್ತೀಚಿನ ಎರಡು ಸಂಚಿಕೆಗಳನ್ನು ನೀವು ಈಗಾಗಲೇ ಗಮನಿಸಿರಬೇಕು.ಇದರ ಧ್ಯೇಯ -ಧೋರಣೆಗಳೂ ನಿಮಗಿಗಾಗಲೇ ಸ್ಪಷ್ಟವಾಗಿರಬೇಕು. ಹಾಗಿದ್ದರೆ ಇನ್ನೇಕೆ ತಡ ? ನೀವು ಇಂಥ ಆಶಯಗಳನ್ನು - ಕನಸುಗಳನ್ನು ಹೊಂದಿದ್ದರೆ ನಮ್ಮೊಂದಿಗೆ ನೀವೂ ಹೆಜ್ಜೆ ಹಾಕಬಹುದು.

ಸಧ್ಯ ನೀವು ಮಾಡಬೇಕಾದುದು ಇಷ್ಟೆ : ನಿಮ್ಮ ತಾಲೂಕಿನ ಭ್ರಷ್ಟ ಅಧಿಕಾರಿಗಳ, ರಾಜಕಾರಣಿಗಳ , ಸೋಗಲಾಡಿ ಸ್ವಾಮಿಗಳ ಕುರಿತು ಫೋಟೋ ಸಹಿತ ವರದಿ ಬರೆದು ಕಳಿಸಿರಿ.ವಿಷಯ ನೇರ ಹಾಗೂ ಸ್ಪಷ್ಟವಾಗಿರಲಿ. (ನಿಮ್ಮಲ್ಲಿ ಒಂದು ಪ್ರತಿ ಇಟ್ಟುಕೊಂಡು ನಮಗೆ ಕಳಿಸಿ.) ಆಯ್ಕೆಯಾದ ಬರಹಗಾರರನ್ನು ನಮ್ಮ ಪತ್ರಿಕೆಯ ವರದಿಗಾರನನ್ನಾಗಿ ನೇಮಿಸಿಕೊಳ್ಳಲಾಗುತ್ತದೆ.

ಲಿಂಗಸೂಗೂರು , ಯಾದಗಿರ - ಸುರಪುರ -ಜೇವರ್ಗಿ -ಚಿತ್ತಾಪುರ - ಅಫಜಲಪುರ- ಚಿಂಚೋಳಿ ಆಯಾ ತಾಲೂಕಿನ ಬರಹಗಾರರಿಗೆ / ಪತ್ರಕರ್ತರಿಗೆ ಆದ್ಯತೆ ನೀಡಲಾಗುವುದು. ಸಂಪರ್ಕಿಸಿರಿ.

೦ ವಿಶ್ವಾರಾಧ್ಯ ಸತ್ಯಂಪೇಟೆ , ೯೪೮೦೧೭೧೬೧೫

# ಧ್ರಮ್‌ಸಿಂಗ್ ಡುಬ್ಬ ಕೆತ್ತಲು ಗೌನಳ್ಳಿ ರೆಡಿ ?

ಧರ್ಮಸಿಂಗ್ ಇಷ್ಟು ವರ್ಷಗಳವರೆಗೆ ತನ್ನ ತವರು ಮನೆ ಎಂಬಂತೆ ಆಯ್ಕೆಯಾಗಿ ಬರುತ್ತಿದ್ದ ಜೇವರ್ಗಿ ಮತಕ್ಷೇತ್ರ ಇನ್ನು ಮುಂದೆ ಅವರ ಕೈಯ್ಯಲ್ಲಿ ಉಳಿಯಲಾರದು ಎನಿಸುತ್ತಿದೆ.



ಇದಕ್ಕೆ ಬಹು ಮುಖ್ಯ ಕಾರಣ ಕೈ ಕೊಡುತ್ತಿರುವ ಅವರ ಆರೋಗ್ಯ , ಎದ್ದರೆ ಕೂಡಲಾಗದ, ನಿಂತರೆ ಕುಳಿತುಕೊಳ್ಳಲಾಗದ ದೈನಸಿ ಸ್ಥಿತಿ. ಮುಖ್ಯವಾಗಿ ಮರೆವು ಧರ್ಮಸಿಂಗನನ್ನು ಕಾಡಲು ಶುರುಮಾಡಿವೆ. ಇದೆಲ್ಲಕ್ಕಿಂತ ಮುಖ್ಯವಾಗಿ ತನ್ನ ಮತಕ್ಷೇತ್ರದ ಕೆಲಸಗಳತ್ತ ದಿವ್ಯ ನಿರ್ಲಕ್ಷ್ಯ. ಸರಕಾರದ ಏನೆಲ್ಲ ಬಜೆಟ್‌ಗಳನ್ನು ತಾಲೂಕಾ ಪಂಚಾಯತಿ, ಪಟ್ಟಣ ಪಂಚಾಯತಿಗೆ ತಂದು ಹಾಕಿದ್ದಾನಾದರೂ ಅವು ಸರಿಯಾದ ರೀತಿಯಲ್ಲಿ ಬಳಕೆಯಾಗುತ್ತಿವೆಯೆ ? ಎಂದು ಅಪ್ಪಿ ತಪ್ಪಿಯೂ ನೋಡುವವನಲ್ಲ. ತನ್ನ ಹಿಂಬಾಲಕರೆಂಬ ಗಡವಗಳು ತನ್ನ ಎದುರಾ ಎದುರೆ ನಿಂತು ಎಲ್ಲವನ್ನೂ ಬಿಟ್ಟು ಬಿಡದೆ ಮೇಯ್ಯುತ್ತಿದ್ದರೂ ಆ ಕಡೆ ಹೊರಳಿಯೂ ನೋಡದವ. ತನ್ನ ಗುಡಾಣವಂತೂ ತುಂಬಿದೆ. ತನ್ನ ಸುತ್ತ ಮುತ್ತಲವರ ಗುಡಾಣವೂ ಕೊಂಚ ತುಂಬಲಿ ಎಂಬ ಉಮೇದು ಈ ದೊಡ್ಡ ಗಡವಕ್ಕೆ.



ಧರ್ಮಸಿಂಗ್ ಕರ್ನಾಟಕ ರಾಜ್ಯದಲ್ಲಿ ಏನಾದರೂ ಆಗಿದ್ದರೆ ಅದರ ಹಿಂದೆ ಮತಕ್ಷೇತ್ರದ ಬಹುತೇಕ ಸಾಮಾನ್ಯ ಕಾರ್ಯಕರ್ತರಿಂದ ಹಿಡಿದು ಗೌನಳ್ಳಿ ಬಸ್ಸಣ್ಣನಂಥವರ ಕೊಡುಗೆ ಅಪಾರ. ಈಗ ಒಮ್ಮಿದೊಮ್ಮೆ ಅದೇ ಗೌನಳ್ಳಿ ಬಸ್ಸಣ್ಣನವರನ್ನು ಪಕ್ಷದಿಂದಲೆ ಉಚ್ಚಾಟಿಸುವ ಉದ್ಧಟತನ ತೋರಿದ್ದಾನೆ. ಹಲವಾರು ಸಂದರ್ಭಗಳಲ್ಲಿ ಗೌನಳ್ಳಿ ಬಸ್ಸಣ್ಣನನ್ನು ಹಿಡಕೊಂಡು ಊರೂರು ತಿರುಗಾಡಿದಂತೆ ತೋರಿಸಿಕೊಂಡು ಕುರುಬರ ಮತಗಳನ್ನು ತನ್ನ ಬುಟ್ಟಿಗೆ ಹಾಕಿಕೊಂಡಿದ್ದ. ಆದರೆ ಅದೇ ಕುರುಬ ಜನಾಂಗದ ಗೌನಳ್ಳಿಯನ್ನು ಪಕ್ಷದಿಂದ ಕಿತ್ತುಹಾಕಿ ಧ್ರಮ್‌ಸಿಂಗ್ ಘೋರ ತಪ್ಪನ್ನೆ ಎಸಗಿದ್ದಾನೆ.

ಪಕ್ಷದಿಂದ ಉಚ್ಚಾಟನೆಗೊಂಡ ಗೌನಳ್ಳಿ ಈಗ ಆಕ್ರೋಶದಿಂದ ಕುದಿಯುತ್ತಿದ್ದಾನೆ. ಜೊತೆಗೆ ಈಗಾಗಲೆ ಮತಕ್ಷೇತ್ರದ ಉದ್ದಗಲಕ್ಕೂ ಸಂಚರಿಸಿ ತಾನು ಯಾರಿಗೆ ಸಪೋರ್ಟ ಮಾಡಿದರೆ ಚೆನ್ನಾಗಿರುತ್ತದೆ ? ಎಂದು ತನ್ನ ಹಿಂಬಾಲಕರನ್ನು ಕೇಳತೊಡಗಿದ್ದಾನೆ. ಗೌನಳ್ಳಿಯೇನಾದರೂ ಗಟ್ಟಿಯಾಗಿ ನಿಂತು , ಬಿ.ಜೆ.ಪಿಯ ನರಬೋಳಿ ದೊಡ್ಡಪ್ಪಗೌಡನನ್ನು ಬೆಂಬಲಿಸುವ ನಿರ್ಧಾರಕ್ಕೆ ಬಂದರೆ ಆತನನ್ನು ಉಳಿಸಲೂ ಆ ದೇವರು ಕೂಡ ಸಹಾಯಕ್ಕೆ ಬರಲಾರ ಎಂದೆನಿಸುತ್ತದೆ. ಧ್ರಮ್‌ಸಿಂಗ್‌ನ ಮಗ ಅಜಯಸಿಂಗ್ ತನ್ನ ತಂದೆಯ ಹೆಸರಿನ ಟ್ರಸ್ಟ ಮಾಡಿಕೊಂಡು ಗಿಮಿಕ್ ಮಾಡುತ್ತಿದ್ದರೆ ಏನು ಕಿಸಿಯಲಾಗುವುದಿಲ್ಲ. ಜಿಲ್ಲಾ ಕಾಂಗ್ರೈ ಅಧ್ಯಕ್ಷ ಅಲ್ಲಮಪ್ರಭು ಪಾಟೀಲ ಎಷ್ಟೆ ಎಗರಾಡಿದರೂ ಕಂಟಮಠ ಹುದುಲಲ್ಲಿ ಸಿಗಬಿದ್ದ ಧರ್ಮಸಿಂಗ್‌ನ ಡುಬ್ಬ ಕೆತ್ತಲು ಆಗಲೇ ಗೌನಳ್ಳಿ ರೆಡಿಯಾಗಿದ್ದಾರೆ.

೦ ಬಸವರಾಜ ಕೋರವಾರ

# ಸಿಮೆಂಟ್ ಫ್ಯಾಕ್ಟರಿಗಳಿಂದ ತತ್ತರಗೊಂಡ ಸೇಡಂ ಜನರ ಬದುಕು

ಯಾರೇನು ಲಭೋ ಲಭೋ ಅಂದರೂ ಸೇಡಂಗೆ ದಾಲ್ಮಿಯಾ ಸಿಮೆಂಟ್ ಕಂಪನಿ ಕಾಲಿಡುವುದಂತೂ ತಪ್ಪಿದ್ದಲ್ಲ ಎನ್ನುವ ಸ್ಥಿತಿ ಇದೀಗ ನಿರ್ಮಾಣವಾಗಿದೆ. ಇದಕ್ಕೆ ಬಹು ಮುಖ್ಯ ಕಾರಣ ರಾಜ್ಯದ ನಾಮರ್ಧ ರಾಜಕಾರಣಿಗಳು ಎಂದು ಹೇಳದೆ ವಿಧಿಯಿಲ್ಲವಾಗಿದೆ.ತಾವು ಎಷ್ಟು ಕಮೀಷನ್ ಕೇಳುತ್ತಾರೋ ಅಷ್ಟನ್ನು ನೀಡಿದರೆ ಸಾಕು ಇವರೆಲ್ಲ ಕಣ್ಮುಚ್ಚಿ ತಮ್ಮ ಅವ್ವನನ್ನು ಬೇಕಾದರೂ ಮಾರಿ ಬಿಡಬಲ್ಲರು. ಹೇಳಿ ಕೇಳಿ ಸುಮಾರ ಸ್ವಾಮಿ ಮುಖ್ಯಮಂತ್ರಿಯಾಗಿದ್ದ ಕಾಲ. ಆಗ ಸರಕಾರ ನಡೆದದ್ದೇ ಪರ್ಸೇಂಟೇಜ್ ಲೆಕ್ಕಾಚಾರದಲ್ಲಿ. ಇಂಥ ಸಂದರ್ಭದಲ್ಲಿ ದಾಲ್ಮೀಯಾ ಕಂಪನಿ ೪ ಮಿಲಿಯನ್ ಟನ್ ಸಾಮರ್ಥ್ಯದ ಸಿಮೆಂಟ್ ಉತ್ಪಾದಿಸುವ , ೪೦ ಮೆಗಾವ್ಯಾಟ್ ಪವರ್ ಪ್ಲಾಂಟ್‌ಗೆ ಅನುಮೋದನೆ ಪಡಕೊಂಡಿದೆ.



ಜಿಲ್ಲಾಧಿಕಾರಿಗಳ ಎದುರುಗಡೆಯೆ ಗುಂಡು ಹಾರಿಸುತ್ತಿರುವುದು

ಇತ್ತೀಚೆಗೆ ಅದು ಸೇಡಂ ತಾಲೂಕಿನ ಕೊಂಕನಳ್ಳಿ, ಹೊಸಳ್ಳಿ ಸೀಮಾಂತರದಲ್ಲಿ ರೈತರ ಕಣ್ಣೀರೊರೆಸಲು ಎಂಬಂತೆ ಜಿಲ್ಲಾಧಿಕಾರಿ ಪಂಕಜಕುಮಾರ ಪಾಂಡೆ ನೇತೃತ್ವದಲ್ಲಿ ಸಭೆಯೊಂದನ್ನು ಆಯೋಜಿಸಿತ್ತು. ಭಾವನಾತ್ಮಕವಾಗಿ ಹಾಗೂ ಸಹಜವಾಗಿ ಅಲ್ಲಿನ ರೈತರು ರೊಚ್ಚಿಗೆದ್ದಾಗ ಪಂಕಜಕುಮಾರ ಪಾಂಡೆ ಎಂಬ ಜಿಲ್ಲಾಧಿಕಾರಿಯ ಗನ್ ಮ್ಯಾನ್ ಅನಾವಶ್ಯಕ ಗಾಳಿಯಲ್ಲಿ ಗುಂಡು ಹಾರಿಸಿ ಭಯದ ವಾತಾವರಣ ಉಂಟುಮಾಡಿದ್ದ. ಇದನ್ನು ತರಾಟೆಗೆ ತಕ್ಕೊಳ್ಳದ ಜಿಲ್ಲಾಧಿಕಾರಿ ತನ್ನ ಮನಬಂದಂತೆ ವರ್ತಿಸಿ , ತಾನು ಉದ್ಯಮಿಗಳೆಂಬ ತಿಮಿಂಗಲ ಪರ ಎಂಬುದನ್ನು ತೋರಿಸಿಕೊಂಡ.

ಇದೆಲ್ಲ ನಾಟಕ ಚೆನ್ನಾಗಿ ಬಲ್ಲ ಶರಣಪ್ರಕಾಶ ಪಾಟೀಲ , ಚಂದ್ರಶೇಖರ ರಡ್ಡಿ ಮದನಾ ಎಂಬ ಪುಢಾರಿ ಗಣಂಗಳು ಕೊಂಚ ಹಾರಾಡಿದಂತೆ ಮಾಡಿ ಸದರಿ ಕಂಪನಿಯವತಿಯಿಂದ ಹೆಚ್ಚಿನ ಮೊತ್ತದ ಭಕ್ಷೀಸು ಗಿಟ್ಟಿಸಿಕೊಂಡದ್ದು ಸುಳ್ಳಲ್ಲ. ಜನತಾದಳ ಸರಕಾರವೆ ಅನುಮತಿ ನೀಡಿದ ದಾಲ್ಮೀಯಾ ಸಿಮೆಂಟ್ ಕಂಪನಿಯನ್ನು ಅದೇ ಪಕ್ಷದ ಮದನಾ ವಿರೋಧಿಸುತ್ತಾನೆಂದರೆ ಏನರ್ಥ ? ಈತ ಉಗಿಯಬೇಕೆಂದಿದ್ದರೆ ಮೊದಲು ತಮ್ಮ ಪಕ್ಷದ ಮುಖ್ಯ ಮಂತ್ರಿ ಕುಮಾರಸ್ವಾಮಿಯ ಮುಖ ತೋಯ್ಯುವಂತೆ ಉಗುಳಬೇಕು. ಅದು ಇವರಿಗೆ ಸಾಧ್ಯವೆ ?

ಇದೇನೆ ಇರಲಿ : ಈ ಹಿಂದೆ ೨೮ ವರ್ಷಗಳ ಹಿಂದೆ ರಾಜಶ್ರೀ ಸಿಮೆಂಟ್ ಕಂಪನಿ ಕೂಡ ದಾಲ್ಮೀಯಾ ಕಂಪನಿ ಬಂದಂತೆ ಕಳ್ಳ ಹೆಜ್ಜೆಗಳನ್ನಿಟ್ಟುಕೊಂಡು ಬಂದಿತ್ತು. ತರುವಾಯ ವಾಸದತ್ತ ಹಾಗೂ ಸೌಥ ಇಂಡಿಯಾ ಸಿಮೆಂಟ್ ಕಂಪನಿಗಳೂ ಕೂಡ ಅದೆ ಜಾಡಿನಲ್ಲೆ ಬಂದು ಠಿಕಾಣಿ ಹೂಡಿಕೊಂಡಿವೆ. ಇವು ಈ ನೆಲದಲ್ಲಿ ಕಾಲೂರುವುದಕ್ಕಿಂತ ಮುಂಚೆ ಎಲ್ಲರ ಬಾಯಲ್ಲಿ ನೀರೂರುವಂಥ ಆಶ್ವಾಸನೆಯ ಸುರಿಮಳೆಯನ್ನೇ ಕರೆಯಿಸಿತ್ತು. ಸೇಡಂ ತಾಲೂಕನ್ನು ರಾಜ್ಯದಲ್ಲಿ ಮಾದರಿ ತಾಲೂಕು ಮಾಡುವ ಭರವಸೆಯನ್ನು ನೀಡಿತು. ಆದರೆ ಇದುವರೆಗೆ ಅದು ಮಾಡಿದ್ದೇನು ? ಎಂದು ಕೇಳಿದರೆ, ಯಾರಿಗಾದರೂ ದಿಗಿಲಾಗುತ್ತದೆ.

## ಹಕೀಕತ್



ಸಿಮೆಂಟ್ ಕಂಪನಿಗಳು ಉಪಯೋಗಿಸುವ ಜಾಸ್ತಿ ನೀರಿನಿಂದ ಈ ಹಿಂದೆ ತುಂಬಿ ಪರಿಯುತ್ತಿದ್ದ ಇಲ್ಲಿನ ನದಿಗಳಾದ ಕಮಲಾವತಿ ಹಾಗೂ ಕಾಗಿಣಾ ನದಿ ಅಕ್ಷರಶಃ ಬತ್ತಿ ಹೋಗಿವೆ. ಇದರಿಂದ ಬೋರವೆಲ್ ಬಾವಿಗಳಲ್ಲಿಯ ನೀರೂ ಬತ್ತಿಹೋಗಿದೆ. ಅಂತರಜಲ ಮಟ್ಟ ಕುಸಿಯುತ್ತಿದ್ದಂತೆ ಭೂತಾಯಿಯ ಒಡಲು ಬರಿದಾಗಿ ಅದೆಲ್ಲ ಕರಲು ಬಿದ್ದಿದೆ. ಮಣ್ಣು ಅಲ್ಲದ ಉಸುಕು ಅಲ್ಲದ ಈ ಬಂಜರು ಭೂಮಿಯಲ್ಲಿ 'ಜಾಕ್ ' ಎಂಬ ಸಸ್ಯ ಮಾತ್ರ ಬೆಲೆದು ತನ್ನ ವಿಕಟ ನಗೆ ಹೊಮ್ಮಿಸುತ್ತಿದೆ. ಇದರಿಂದ ಸಹಜವಾಗಿ ದುರ್ವಾಸನೆ ಹೆಚ್ಚಾಗಿ ,ಸೊಳ್ಳೆಗಳ ಆವಾಸ ಸ್ಥಾನಗಳಾಗಿ ಮಾರ್ಪಡಟ್ಟಿವೆ. ಈ ಸಿಮೆಂಟ್ ಕಾರ್ಖಾನೆಗಳು ಬಿಡುವ ಧೂಳಿನಿಂದಲಂತೂ ಶೇಕಡಾ ೫೦ ರಷ್ಟು ಜನಕ್ಕೆ ಈಗಾಗಲೇ ಅಸ್ಥಮಾ ರೋಗ ಬಂದಿದೆ. ದನಕರುಗಳಿಗೆ – ಪಶುಪಕ್ಷಿಗಳ ಮೇಲೆಯೂ ಈ ಧೂಳಿನಿಂದ ಉಂಟಾಗುವ ಮಾರಕ ಪರಿಣಾಮ ಊಹಿಸಲು ಸಾಧ್ಯವಿಲ್ಲ. ವಿಪರೀತ ಸೂಸುವ ಧೂಳು ಪರಿಸರದ ಜೊತೆ ಸೇರಿ ಸಸ್ಯಗಳ ಜೈವಿಕ ಕ್ರಿಯೆಗೂ ಸಂಚಕಾರ ತಂದೊಡ್ಡುವ ಸಂಗತಿಯನ್ನು ಕೃಷಿ ಇಲಾಖೆಯ ತಜ್ಞರೆ (ಶೇಕಡಾ ೬೫ ಪರ್ಸೆಂಟ್ ಬೆಳೆಗಳ ಮೇಲೆ ಪರಿಣಾಮ ಬೀರುತ್ತದೆ ಎಂಬ ವರದಿ) ಬಯಲಿಗೆ ಹಾಕಿದ್ದಾರೆ. ಇದರಿಂದ ಸಹಜವಾಗಿ ಬೆಳೆಗಳ ಇಳುವರಿಯೂ ಕಡಿಮೆಯಾಗುತ್ತ ನಡೆದಿದೆ. ರೈತರ ಹೊಟ್ಟೆಯ ಮೇಲೂ ಇದರ ಕರಾಳ ಛಾಯೆ ಬಿದ್ದಿದೆ. ಇವೆಲ್ಲ ಸಂಗತಿಗಳು ನಿಜಕ್ಕೂ ಎಲ್ಲರನ್ನು ತಲ್ಲಣಗೊಳಿಸುವಂಥವು.

ಆದರೆ ಇದರ ಖಬರು ಇಲ್ಲದ ಬೇವಾರ್ಸಿ ಪುಢಾರಿಗಳು ಚುನಾವಣೆಗಳು ಬಂದಾಗೊಮ್ಮೆ ಈ ಕಂಪನಿಗಳ ಮಾಲೀಕರ ಜೇಬಿಗೆ ಜೋತು ಬೀಳುತ್ತಾರೆ. ಚುನಾವಣೆಯ ಸಂದರ್ಭದಲ್ಲಿ ಯಾವುದೇ ಪಕ್ಷದ ನಾಯಕನಿಗೂ ಇವರು ಲಕ್ಷಾಂತರ ಹಣ ಸಂದಾಯ ಮಾಡುತ್ತಾರೆ. ಗೆಲ್ಲುವ ಕುದುರೆ ಎಂದು ತೋರಿಸಿದ ಕ್ಯಾಂಡಿಡೇಟ್‌ಗಂತೂ ಹಣದ ಹೊಳೆಯನ್ನೇ ಹರಿಸುತ್ತಾರೆ. ಹೀಗೆ ಕಾರ್ಖಾನೆಗಳ ಹೊಲಸಿನ ಹೊಂಡದಲ್ಲಿ ಈಜಿ ಗೆದ್ದು ಬಂದ ಕ್ಷೇತ್ರದ ಶಾಸಕ ಅವರ ಹಿತ ಕಾಯುವವನಲ್ಲದೆ ಜನಸಾಮಾನ್ಯರ ಹಿತ ಕಾಯುವ ನೈತಿಕ ಧೈರ್ಯ ಬರುವುದಾದರೂ ಹೇಗೆ ? ಹೀಗಾಗಿ ಅವುಗಳೆಲ್ಲ ಮೂಲ ಒಪ್ಪಂದದಲ್ಲಿ ಮಾಡಿಕೊಂಡ ಕರಾರುಗಳನ್ನೆಲ್ಲ ಗಾಳಿಗೆ ತೂರಿ ಜನಗಳ ಆರೋಗ್ಯದ ಜೊತೆಗೆ ಸರಸವಾಡುತ್ತ ನಡೆದಿವೆ.

ಈ ಕಾರ್ಖಾನೆಗಳ ಮುಖ್ಯಸ್ಥರು ಎಂಥ ತಾಯ್ಗಂಡರೆಂದರೆ ತಮ್ಮ ಉದ್ದೇಶಿತ ಕಂಪನಿಯನ್ನು ಬೇಕೆಂದೆ ಗ್ರಾಮಪಂಚಾಯತಿಯ ಮಟ್ಟದ ಊರುಗಳಲ್ಲಿ ಬರುವಂತೆ ನೋಡಿಕೊಳ್ಳುತ್ತಾರೆ. ಪಟ್ಟಣಗಳಲ್ಲಿ ಕಾರ್ಖಾನೆ ಸ್ಥಾಪಿಸಿದರೆ ಹೆಚ್ಚಿನ ಟೆಕ್ಸ ಕಟ್ಟಬೇಕಾದಿತೆಂಬ ಉಮೇದೆ ಇದಕ್ಕೆಲ್ಲ ಕಾರಣವಾಗಿದೆ. ಜೊತೆಗೆ ಹಲವಾರು ಸೌಲತ್ತುಗಳನ್ನೂ ಗ್ರಾಮ ಮಟ್ಟದಲ್ಲಿ ಕಂಪನಿ ಸ್ಥಾಪಿಸುವುದರಿಂದ ಪಡೆಯಬಹುದಾಗಿದೆ. ಹಿಂದೆ ಇರುವ ವಾಸವದತ್ತ, ರಾಜಶ್ರೀ ಹಾಗೂ ಸೌಥ ಇಂಡಿಯಾ ಸಿಮೆಂಟ್ ಕಂಪನಿಗಳು ಗ್ರಾಮಪಂಚಾಯತಿ ವ್ಯಾಪ್ತಿಯಲ್ಲಿ ಸ್ಥಾಪಿತವಾದವುಗಳೆ. ಹೋಗಲಿ ಆಯಾ ಗ್ರಾಮಪಂಚಾಯತಿಗಾದರೂ ಕರಕಟ್ಟಿದವೆ ? ಅಲ್ಲೂ ಇಲ್ಲ. ಏನೇನೋ ಸಬೂಬು ಹೇಳಿ ತಮ್ಮ ಕೈ ಜಾಡಿಸಿಕೊಂಡವು. ಕೊನೆಗೂ ಮದನಾ ಪ್ರಯತ್ನದಿಂದ ಕಾರ್ಖಾನೆಯಿರುವ

ಪ್ರಯತ್ನದಿಂದ ಕಾರ್ಖಾನೆಯಿರುವ ಪ್ರದೇಶವನ್ನು ಪುರಸಭೆಯ ವ್ಯಾಪ್ತಿಗೆ ತಂದು ಹೈಕೋರ್ಟ ಮೆಟ್ಟಿಲೆರಿದಾಗಲೇ ಎರಡು ಕೋಟಿ ಮೂವ್ವತ್ತೈದು ಲಕ್ಷ ರೂಪಾಯಿಗಳನ್ನು ಪೀಕಿದವು.

ಕಾರ್ಖಾನೆಗಳಲ್ಲಿ ಸ್ಥಳೀಯರಿಗೆ ಉದ್ಯೋಗ ಅವಕಾಶ ಕೊಡುತ್ತೇವೆ ಎಂದು ಬೊಗಳೆ ಭಾಷಣ ಮಾಡುವ ಮಾಲೀಕರು ಬರು ಬರುತ್ತಾ ನಿಮ್ಮಲ್ಲಿ ಸಿರಿಮ್ಯಾಕ್ ಇಂಜನಿಯರ್,ಪ್ರೋಡಕ್ಷನ್ ಇಂಜನಿಯರ್ , ಬೈಲರ್ ಆಪರೇಟರ್ ಇಂಜನಿಯರ್, ಮೈನಿಂಗ್ ಇಂಜನಿಯರ್ ಪಾಸಾದ ಅರ್ಹ ಅಭ್ಯರ್ಥಿಗಳು ಬೇಕು ಎನ್ನುತ್ತಾರೆ. ವಾಸ್ತವದಲ್ಲಿ ಈ ಕೋರ್ಸಗಳನ್ನು ಹೇಳಿಕೊಡುವ ಇಂಜನೀಯರಿಂಗ್ ಕಾಲೇಜುಗಳೆ ನಮ್ಮ ಭಾಗದಲ್ಲಿ ಇರಲಿಲ್ಲ. ಇದರಿಂದ ಉತ್ತರ ಭಾರತದ ಜನ ಸಾಗರದಂತೆ ಹರಿದು ಬಂದು ನಮ್ಮ ನೆಲದಲ್ಲಿ ತಮ್ಮ ಜಂಡಾ ಊರಿಬಿಟ್ಟಿದ್ದಾರೆ. ನಮ್ಮ ಭಾಗದ ಜನಗಳೇನಿದ್ದರೂ ಗೇಟು ಕಾಯುವ , ಕಸಬಳಿಸುವ, ಬಹಳವಾದರೆ ಆಫೀಸ ಕಾರಕೂನನಾಗುವ ಹುದ್ದೆಗಳನ್ನು ಮಾತ್ರ ಪಡೆದು ಸಂತೃಪ್ತರಾಗಬೇಕಾದ ಪರಿಸ್ಥಿತಿ ಇದೆ. ಈ ಬಗ್ಗೆ ಸರಿಯಾಗಿ ಆಲೋಚಿಸಿ ಸಮರ್ಥ ಅಭ್ಯರ್ಥಿಗಳನ್ನು ಕಾರ್ಖಾನೆಗೆ ಒದಗಿಸಬೇಕಾದ ರಾಜಕಾರಣಿಗಳು ಮುಂದಾಲೋಚನೆ ಎಂಬುದು ಇಲ್ಲದ ಬುದ್ಧುಗಳಾಗಿದ್ದಾರೆ.

ಶರಣಪ್ರಕಾಶ

ಇಂಥ ಇಕ್ಕಟ್ಟಿನ ಸಂದರ್ಭದಲ್ಲಿ ರೈತರು ತಾವೆ ಸಂಘಟಿತರಾಗಿ ಕಾರ್ಖಾನೆಗಳೆಂಬ ಖದೀಮರ ವಿರುದ್ಧ ಟೊಂಕಕಟ್ಟಿ ನಿಂತು ಬೀದಿಗೆ ಇಳಿಯಬೇಕು. ಸಂಘಟಿತ ಹೋರಾಟದ ಮುಂದೆ ಸರಕಾರದ ಯಾವುದೆ ನಿಯಮಗಳು ಪರಿಣಾಮಬೀರುವುದಿಲ್ಲ. ಸದರಿ ಕಾರ್ಖಾನೆಗಳು ನೀಡುವ ಬೊಗಳೆ ಮಾತುಗಳನ್ನು ಅನುಷ್ಠಾನಕ್ಕೆ ತರುವ ನಿಟ್ಟಿನಲ್ಲಿ ಸಮಿತಿಯೊಂದನ್ನು ರಚಿಸಬೇಕು. ಇದರಲ್ಲಿ ಯಾವುದೆ ಬಿಳಿ ಜುಬ್ಬದ ಪುಢಾರಿಗಳ ವಾಸನೆ ಇರಕೂಡದು. ನಾವು ಬದುಕನ್ನೇ ಕಳೆದುಕೊಳ್ಳುತ್ತೇವೆಂದ ಮೇಲೆ ಪಡಕೊಳ್ಳುವುದು ಅಲ್ಪ ಪ್ರಾಮಾಣದಲ್ಲಿಯಾದರೂ ಸಿಗಲಿ ಎಂದು ಬಯಸುವುದು ತಪ್ಪೆ ?

ಈ ನಿಟ್ಟಿನಲ್ಲಿ ಆಲೋಚಿಸಿ ಕಾರ್ಯತತ್ಪರಾಗಬಲ್ಲ ಯುವಕರಿಗಾಗಿ ಸೇಡಂ ಕಾತರದಿಂದ ಕಾಯುತ್ತಿದೆ !

೦ ವರದಿಗಾರ

## ಜಾಹಿರಾತುದಾರರ ಗಮನಕ್ಕೆ

| | | |
|---|---|---|
| ಕೊನೆಯ ಪೂರ್ಣ ಪುಟಕ್ಕೆ | : | ೫೦೦೦ |
| ಕವರ ಪುಟದ ಒಳಪುಟಕ್ಕೆ | : | ೩,೦೦೦ |
| ಕೊನೆಯ ಪುಟದ ಒಳಪುಟಕ್ಕೆ | : | ೨೦೦೦ |
| ಪತ್ರಿಕೆಯ ಒಳಪುಟದ ಪೂರ್ತಿ ಪುಟಕ್ಕೆ | : | ೧೦೦೦ |

ಅಂದಂತೆ ಈ ಸಲ ಪುಟಗಳ ಅಭಾವದಿಂದ ಸಿನೇಮಾ ಹಾಗೂ ವೈದ್ಯಕೀಯ ಪುಟವನ್ನು ಪ್ರಕಟಿಸಲು ಆಗುತ್ತಿಲ್ಲ. ಇದನ್ನು ತಾವೆಲ್ಲ ಅರಿತುಕೊಳ್ಳುವಿರಿ ಎಂದೆ ತಿಳಿದಿದ್ದೇನೆ. ಬರಲೆ ?

೦ ಸಾಯಿಕುಮಾರ ಇಜೇರಿ , ವ್ಯವಸ್ಥಾಪಕರು

AGNI ANKUR Kannada Monthly Price Rs.10/-
April -2008 Rg.No.23/10/AI/Tc89

# ಹಾರ್ದಿಕ ಅಭಿನಂದನೆಗಳು

ನಮ್ಮ ಭಾಗದ ಜನಗಳ ನೋವಿಗೆ ಮಿಡಿಯುವ
ಪ್ರಾಣಮಿತ್ರ ಅಗ್ನಿ ಅಂಕುರಕ್ಕೆ ಸ್ವಾಗತಗಳೊಂದಿಗೆ



Cell : 9880321821

## ಚಂದ್ರಶೇಖರ ಸಿದ್ರಾಮಪ್ಪ ಯಾಳಗಿ

ರಾಜ್ಯಾಧ್ಯಕ್ಷರು
ಮಾನವ ಹಕ್ಕು ರಕ್ಷಣಾ ಹೋರಾಟ ಸಮಿತಿ

PUBLISHER, PROPRIETOR & EDITOR : VISHWARADHYA SATYAMPET
Basavamarga, C. B. Colony SHAHAPUR - Dist::Gulbarga , Cell: 9480161315
Printed At : Grenobles Pvt.Let Super Market Gulbarga
e-mail : satyampet.2007@rediffmail.com